ರೀತಿಯಲ್ಲಿ ನಿರ್ವಚಿಸುವ ರಚನಾವಾದವು ಪಠ್ಯಕ್ಕೆ ನಿರ್ದಿಷ್ಟ ಅರ್ಥವಿದೆಯೆಂದು ಹೇಳುತ್ತದೆ;. ಕೃತಿಯೊಂದು ಸತ್ಯವನ್ನು ಹೇಳುತ್ತದೆ. ವಿಮರ್ಶಕನು ಅದನ್ನು ವಿನಯದಿಂದ ಗ್ರಹಿಸಬೇಕಾಗುತ್ತದೆಯೆಂಬುದು ರಚನಾವಾದದ ನಿಲುವು. (ಕೀರ್ತಿನಾಥ ಕುರ್ತ ಕೋಟಿಯವರ. 'ವಿಮರ್ಶೆಯವಿನಯ'ಕೃತಿಯನ್ನು ಈ ದೃಷ್ಟಿಯಿಂದ ಗಮನಿಸಬಹುದು). ರಚನೆಯೆನ್ನುವುದು ಒಂದು ಪ್ರಾತಿನಿಧಿಕ ಸ್ವರೂಪ. ರಚನೆಗೆ ಒಂದು ರೀತಿಯ ಸಮಗ್ರತೆಯಿರುತ್ತದೆ. ಈ ಸಮಗ್ರತೆಯು ಅದರ ಅನನ್ಯತೆಗೆ ಕಾರಣವಾಗಿತ್ತದೆ ಇತ್ಯಾದಿ ವಾದಗಳನ್ನು ರಚನಾವಾದವು ಮಂಡಿಸುತ್ತದೆ.

ನಿರಚನವು ಈ ರೀತಿಯ 'ಅನ್ವಯ'ದ ಮತ್ತು ಚೌಕಟ್ಟಿನೊಳಗೆ ನಿರ್ದಿಷ್ಟ ಅರ್ಥವಂತಿಕೆಯನ್ನು ಕಾಣುವ ಪ್ರಕ್ರಿಯೆನ್ನು ನಿರಾಕರಿಸುತ್ತದೆ. ಕೃತಿ ಹೇಳುವ ಸತ್ಯ ಯಾವುದು? ಎಂಬುದು ನಿರಚನ ಸಿದ್ಧಾಂತದ ಪ್ರಶ್ನೆಯಾಗಿದೆ. ಈ ಮಾತಿನ ಹಿಂದೆ ನೀಶೆಯ ತತ್ತ್ವಜ್ಞಾನದ ಗ್ರಹಿಕೆಗಳು ಸೇರಿಕೊಂಡಿವೆ. ವಾಸ್ತವವಾಗಿ ನಾನು 'ಸತ್ಯ'ವೆಂದು ಯಾವುದನ್ನು ಹೇಳುತ್ತೇವೆಯೋ ಅದು ಪೂರ್ಣ ಸತ್ಯವಾಗಿರುವುದಿಲ್ಲ. 'ಮನುಷ್ಯನ ಮನುಸ್ಸು ಮೊದಲು ವಸ್ತುವನ್ನು ಪ್ರತಿಮೆಯಾಗಿ ಪರಿವರ್ತಿಸುತ್ತದೆ. ಮೊದಲು ರೂಪಕ: ಅದನ್ನು ಅವಲಂಬಿಸಿಕೊಂಡಂತೆ ಧ್ವನಿ : ಅನಂತರ ಬರವಣಿಗೆ , ಹೀಗಿರುತ್ತದೆ' ಸತ್ಯ; ವಾಸ್ತವವೆಂದು ನಾವು ಹೇಳುವಾಗ ನಮಗೆ ಬೇಕಾದಂತೆ ಸತ್ಯದ ನಿರ್ವಚನ ಮಾಡುತ್ತೇವೆ. ಮನಸ್ಸು ಯಾವುದನ್ನು ಪ್ರಮುಖವಾಗಿ ಗ್ರಹಿಸುತ್ತದೆಯೋ ಅದನ್ನು ಹೇಳಿದಷ್ಟಕ್ಕೆ ಅದು ಸತ್ಯವಾಗಿರುವುದಿಲ್ಲ. ಅದರ ಪರಿಕಲ್ಪನೆಗಳು ಭಿನ್ನವಾಗುತ್ತಾ ಹೋಗುತ್ತದೆ. ಸತ್ಯವೆನ್ನುವುದು ಅನ್ವಯಕ್ಕೆ ಸಂಬಂಧಿಸಿದ್ದು, ಹಾಗೆಯೇ ಆಲೋಚನೆಯೆನ್ನುವುದು ಶುದ್ಧ ರೀತಿಯಲ್ಲಿ ಇರುತ್ತದೆಯೆಂದು ಹೇಳಲು ಬರುವುದಿಲ್ಲ.

ರಚನಾವಾದದ ಪ್ರಕಾರ ಒಂದು ಕೃತಿಯಲ್ಲಿ ಬರುವ ಪ್ರತಿಮೆಯೂ ಕೂಡಾ ಆ ಪಠ್ಯದಲ್ಲಿ ಅದರದೇ ಆದ ಅನನ್ಯತೆಯನ್ನು ಪಡೆದುಕೊಂಡಿರುತ್ತದೆ. ಪ್ರತಿಮೆಯ ಕುರಿತು ಕುವೆಂಪು ಅವರು ಹೇಳುವ ಮಾತನ್ನು ಗಮನಿಸಬಹುದು, 'ಕಲೆಯಲ್ಲಿ ಸತ್ಯಮೈದೋರುವುದು ಬಹುಮಟ್ಟಿಗೆ ಪ್ರತಿಮಾ ವಿಧಾನದಿಂದಲ್ಲದೆ ಪ್ರತಿಕೃತಿ ವಿಧಾನದಿಂದಲ್ಲ. ಸುಪ್ತಚಿತ್ತದಲ್ಲಿ ಸಾಗುವ ಗುಪ್ತಕಾರ್ಯ... ಅದು ಮೂಲಾನುಭವವು ತನಗೆ ಅನಿವಾರ್ಯವೂ ಆವಶ್ಯಕವೂ ಆಗಿರುವ ಸಹಜ ಧರ್ಮದ ಪ್ರೇರಣಾ ಶಕ್ತಿಯಿಂದ ಪಡೆಯುವ ರೂಪ ಧಾರಣೆ, ಅದೊಂದು ಅವತರಣ ಕ್ರಿಯೆ... ಈ ಬೃಹಜ್ಜಗತ್ತೂ ಆತ್ಮದ ಸಂಸ್ಕಾರ ಕೋಟಿಯ ಅವಶ್ಯನಿಯಮಗಳಿಗನುಸಾರವಾಗಿ' ಅನಿವಾರ್ಯವಾಗಿ ಮೂಡಿರುವ ಒಂದು ಮಹದ್ ಪ್ರತಿಮೆಯಾಗುತ್ತದೆ. ಕವಿಯ ಸ್ವರೂಪದಲ್ಲಿ ಕಾವ್ಯಕ್ಕೆ ಅತೀತವಾಗಿರುವ ದರ್ಶನವೇ ಕಾವ್ಯ ಪ್ರತಿಮೆಯಲ್ಲಿ ರೂಪ ಮತ್ತು ಅದರಲ್ಲಿ ಅಂತರ್ಯಾಮಿಯಾಗಿರುವ ದೇವತಾತ್ಮ . ಆ ಆತ್ಮವು-ಅಂತರ್ಯಾಮಿಯಾಗದ ಪ್ರತಿಮೆ ಎಂತಹ ನಿಪುಣ ಕೃತಿಯಾಗಿದ್ದರೂ ಅದು ಬರಿಯ ವಿಗ್ರಹ ಮಾತ್ರ' (ವಿವರಗಳಿಗೆ ನೋಡಿ: ತಪೋನಂದನ), ಕುವೆಂಪು ಅವರಲ್ಲಿ ಪ್ರತಿಮೆಯ ಸಂಗತಿಯು 'ದರ್ಶನ'ವೆಂಬ ಪರಿಭಾಷೆಯನ್ನು ಒಳಗೊಂಡಿದೆ. ಆದರೆ ಕಾವ್ಯದಲ್ಲಿ ಬರುವ ಪ್ರತಿಮೆಯೇ ಕೃತಿಯನ್ನು ಪ್ರತ್ಯಕಗೊಳಿಸುತ್ತದೆಯೆಂಬ ಭಾವವೇ ಮುಖ್ಯವಾಗಿದೆ. ಈ ರೀತಿಯಲ್ಲಿ ರಚನಾವಾದಿ ನಿಲುವು 'ಪ್ರತಿಮೆ'ಯನ್ನು ಕೃತಿಯೊಳಗಿನ ಸತ್ಯವೆಂದು ಪರಿಗಣಿಸುತ್ತದೆ. ರಚನಾವಾದದ ಪ್ರಕಾರ ರಚನೆಯೆನ್ನುವುದು ನಿರ್ದಿಷ್ಟ ವಸ್ತುವನ್ನು ಒಳಗೊಂಡಿರುತ್ತದೆ. ಈ ವಿಚಾರವನ್ನು ನಿರಚನ ಸಿದ್ಧಾಂತವು ನಿರಾಕರಿಸುತ್ತದೆ. ನಿರಚನದ ಪ್ರಕಾರ ನಿರ್ದಿಷ್ಟ ಆಲೋಚನಾ ಕ್ರಮದ ರಚನೆಯೆನ್ನುವುದೇ ಪ್ರಶ್ನಾರ್ಹವಾದುದು. ರಚನೆಯ ಅರ್ಥವಂತಿಕೆಯೆನ್ನುವುದು ಮನಸ್ಸಿನ ಭಾವನೆಗಳನ್ನು ಸೂಚಿಸುತ್ತದೆ. ಮಾತ್ರವಲ್ಲ; ಅದು ಬುದ್ಧಿವಂತಿಕೆಯನ್ನು ಮಿತಿಗೊಳಿಸುತ್ತದೆ. ಬೇರೆ ಬೇರೆ ರೀತಿಯ ರಚನಾಕ್ರಮವೆನ್ನುವುದು ಮನುಷ್ಯನ

ಬುದ್ಧಿವಂತಿಕೆಯಿಂದ ಒಡಗೂಡಿದ ಹುಡುಕಾಟವಾಗಿರುತ್ತದೆ. ಸಾಹಿತ್ಯದ ರಚನೆಯೆನ್ನುವುದು ಈ ಕಾರಣದಿಂದ ಮನುಷ್ಯನ ಒಟ್ಟು ಆಲೋಚನಾಕ್ರಮದ ಪೂರ್ಣವಿವರಣೆಯೆಂದು ಭಾವಿಸಬೇಕಾದ್ದಿಲ್ಲ . ರಚನಾವಾದವು ಅರ್ಥ ರಚನೆಯಲ್ಲಿಯೇ ಇದೆಯೆಂದು ಹೇಳುತ್ತದೆ. ಅಂದರೆ ರಚನಾವಾದದ ಪ್ರಕಾರ , ಆ ಅರ್ಥಕ್ಕೆ ಇರುವ ಕೇಂದ್ರವು ರಚನೆಯ ಒಳಗಡೆಗೆ ಇರುತ್ತದೆ. ಅದು ಶಬ್ದಸಂಯೋಜನೆಯಿಂದಲೇ ಪ್ರಾರಂಭವಾಗುತ್ತದೆ. ಆದರೆ ನಿರಚನ ಸಿದ್ಧಾಂತವು ಶಬ್ದವನ್ನು ಹೇಳುವ ಮನಸ್ಸಿನಿಂದ ಪ್ರಾರಂಭಿಸಿ ಅರ್ಥ , ಪರಿಕಲ್ಪನೆಗಳ ನಡುವಣ ಸಂಬಂಧವನ್ನು ನಿರ್ವಚಿಸುತ್ತದೆ. ಇಮ್ಯಾನುಯಲ್ ಅವನ ಪ್ರಕಾರ ಆಲೋಚನೆಯನ್ನು ನಿರ್ದಿಷ್ಟವಾದುದು ಸ್ವಂತ ಹಾಗೂ ಹೊರಗಿನ ಜಗತ್ತಿಗಿಂತ ಬಾಹಿರವಾದುದು ಎಂದು ಭಾವಿಸಬೇಕಿಲ್ಲ; ನಿಜ ಜೀವನದಲ್ಲಿ ಜರುಗುವ ಘಟನೆಗಳು, ಅನುಭವ ಹಾಗೂ ಆಲೋಚನಾ ಕ್ರಮಕ್ಕೆ ಸಂಬಂಧವಿರುತ್ತದೆ. ಘಟನೆಯೊಂದರ ಕಾರಣ ಮತ್ತು ಅದರ ಪರಿಣಾಮಗಳು ಕಾಂಟನ ಚರ್ಚೆಯಲ್ಲಿ ಬರುತ್ತದೆ. ಕಾಂಟನ ಪ್ರಕಾರ 'ಪ್ರಶ್ನೆ'ಯು ಹೊರಗಿನ ಜಗತ್ತನ್ನು ನೇರವಾಗಿ ಯಾವುದೇ ರೂಪವಿಲ್ಲದೆಯೇ ಸ್ವೀಕರಿಸುತ್ತದೆಯೆಂದು ಭಾವಿಸುವುದು ಕಷ್ಟ. 'ಜ್ಞಾನ' ವೆನ್ನುವುದು ಮನುಷ್ಯನ ಮನಸ್ಸಿನ ಉತ್ಪಾದನೆ. ಮನಸ್ಸು ಜಗತ್ತನ್ನು ಬೇಕಾದಂತೆ ಅನ್ವಯಿಸುತ್ತದೆ. ಜಗತ್ತನ್ನು ಅರ್ಥಮಾಡಿಕೊಳ್ಳುವ ರೀತಿಯಲ್ಲಿ ಮನುಷ್ಯ 'ಸತ್ಯ'ವನ್ನು ಕಟ್ಟಿಕೊಳ್ಳುತ್ತಾನೆ. ಈ ವಾದದಲ್ಲಿ ಹೇಳಲಾಗಿರುವಂತೆ 'ಸತ್ಯ 'ಎನ್ನುವುದು ನಮ್ಮ ಆಲೋಚನೆಗೆ ಅನುಗುಣವಾಗಿ 'ಕಟ್ಟ' ಲಾಗಿರುವುದು. ಹೀಗಾಗಿ ಒಂದು ಕೃತಿಯಲ್ಲಿ ನಿರ್ದಿಷ್ಟ ಸತ್ಯವು ಅಡಗಿದೆಯೆಂದು ರಚನಾವಾದವು ಹೇಳುವುದು ಈ ದೃಷ್ಟಿಯಿಂದ ಅರ್ಥಹೀನವಾಗಿ ಕಾಣಿಸುತ್ತದೆ.

ಸಸೂರ ಭಾಷಾವಿಜ್ಞಾನವು ಮೂಲ ನೆಲೆಯನ್ನು ಬದಿಗಿರಿಸಿದೆ. ಅವನ ಪ್ರಕಾರ ನಮ್ಮ ಜಗತ್ತಿನ ಜ್ಞಾನವು ಭಾಷೆಯಿಂದ ಆವೃತವಾಗಿದ್ದು ಅದು ಜ್ಞಾನವನ್ನು ಪ್ರತಿನಿಧಿಸುತ್ತದೆ. ಅಷ್ಟೇ ಅಲ್ಲದೆ ನಾವು ಬರವಣಿಗೆಯಲ್ಲಿ ಹೇಳುವ ವಸ್ತುವಿಗೂ ನಿಜವಾದ ವಸ್ತುವಿಗೂ ವ್ಯತ್ಯಾಸವಿದೆ. ಒಂದು ವಸ್ತುವಿನ ಮೂಲಕ ಪಡೆಯುವ ಜ್ಞಾನವು ಸಂಕೇತದ ಮೂಲಕ ರಚನಾಕ್ರಮವನ್ನು ಪಡೆಯುತ್ತದೆ. ಈ ಅಭಿಪ್ರಾಯದಂತೆ ರಚನಾಕ್ರಮವೆನ್ನುವುದು 'ವ್ಯಕ್ತಪಡಿಸುವಲ್ಲಿ' ರೂಪುಗೊಂಡಿರುತ್ತದೆ.

ಆಲೋಚನೆ ಮತ್ತು ಅರ್ಥಕ್ಕಿರುವ ಸಂಬಂಧದ ನಿರ್ವಚನವೇ ರಚನಾವಾದದ ಪ್ರಾರಂಭದ ಹಂತವಾಗಿರುತ್ತದೆ. ರಚನಾವಾದವು ಒಂದು ರೀತಿಯಿಂದ ಶೈಕ್ಷಣಿಕ ವಲಯದ ಒಂದು ನಿರ್ಮಾಣ ಅಷ್ಟೇ .

ರಚನಾವಾದವು ಸರಳದ್ವಂದ್ವದ ಪರಿಭಾಷೆಯನ್ನು ಇಟ್ಟುಕೊಂಡಿದೆ. ಅದು ಒಂದು ಕೃತಿಯನ್ನು ನಿರ್ದಿಷ್ಟವಾಗಿ ಓದುವುದನ್ನು ವಿವರಿಸುತ್ತದೆ. ಅಷ್ಟೇ ಅಲ್ಲ; ಅದೊಂದು ರೀತಿಯಲ್ಲಿ ಸಲಹೆ ಕೊಡುವ ಮಾದರಿಯನ್ನೂ ನಿರ್ವಹಿಸುತ್ತದೆ. ರಚನೆಯ ಪರಿಕಲ್ಪನೆಯೆನ್ನುವುದು ಒಂದು ವಸ್ತುವನ್ನು ಕೇಂದ್ರದಲ್ಲಿರಿಸಿಕೊಂಡು ಅದನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವುದೇ ಆಗಿರುತ್ತದೆ. ಹೀಗಾಗಿ ರಚನಾವಾದ ವಿಮರ್ಶೆಯು 'ವಸ್ತು' ವೆಂಬುದನ್ನು ನಿರ್ಣಾಯಕವಾಗಿ ಪರಿಶೀಲಿಸುತ್ತದೆ.

ಗಿರಡ್ಡಿಗೋವಿಂದರಾಜರು 'ಜನ್ನನ ಯಶೋಧರ ಚರಿತೆ' ಯ ಕುರಿತು ಬರೆದ ಲೇಖನವೊಂದರಲ್ಲಿ ವ್ಯಕ್ತಪಡಿಸುವ ಅಭಿಪ್ರಾಯವೊಂದನ್ನು ಇಲ್ಲಿ ಉಲ್ಲೇಖಿಸಬಹುದು: ಅಂತೆಯೇ, 'ಯಶೋಧರ ಚರಿತೆ 'ಯಲ್ಲಿ ಕವಿಯ ಆಶಯ ಏನಿತ್ತೆಂಬುದನ್ನು ಕಂಡು ಹಿಡಿಯುವುದು ವಿಮರ್ಶೆಯ ಮೊದಲ ಕೆಲಸವಾಗಿದೆ. ಕಾವ್ಯದಲ್ಲಿ ಪಾತ್ರಗಳ ಬಿಡಿ ಬಿಡಿಯಾದ ಅಭ್ಯಾಸದಿಂದ; ಅವುಗಳು ವ್ಯಕ್ತವಾಗಿ ಹೇಳುವ ಮಾತುಗಳಿಂದ ಅಥವಾ ಕವಿಯೇ ಹೇಳುಕೊಳ್ಳುವ ವಿಚಾರಗಳಿಂದ ಕವಿಯ

ಆಶಯವನ್ನು ನಿರ್ಣಯಿಸುವುದಕ್ಕಿಂತಲೂ ಹೆಚ್ಚು ಮಹತ್ವದ್ದು. ಅದರ ಪ್ರತಿಮಾ ಸಂಯೋಜನೆಯ ಪರೀಕ್ಷೆ. ಒಂದು ಕಾವ್ಯದ ಅರ್ಥದ ಸಂಘಟನೆಯನ್ನು ಶಬ್ದವಿನ್ಯಾಸ ( verbal patterns,) ವಸ್ತುಸೂಚಕ ಪ್ರತಿಮೆಗಳು ( thematic imaginary). ಸಂಕೇತಗಳು, ಸಾಂಕೇತಿಕ ಕ್ರಿಯೆಗಳು ಮೊದಲಾದ ಪ್ರಾಥಮಿಕ ಘಟಕಗಳಿಗೆ ಇಳಿಸಿ ಅದರ ಆಶಯವನ್ನು ಪುನಾರಚಿಸಬಹುದು. ಒಂದು ಕಾವ್ಯದ ಸ್ವರೂಪ ಮೂಲಭೂತವಾಗಿ ಅರ್ಥಗಳ ಬಂಧವಾಗಿದೆ. ಅದರ ವಸ್ತುವಿನ ಬೆಳವಣಿಗೆಯನ್ನು ಪ್ರತಿಮೆಗಳ ವಿನ್ಯಾಸ - ಪ್ರತಿವಿನ್ಯಾಸಗಳಲ್ಲಿ ನೋಡಬಹುದು. ಪ್ರತಿಮೆಗಳೆಂದರೆ ಕಾವ್ಯಕ್ಕೆ ಸೊಬಗನ್ನು. ಆಸ್ವಾದತೆಯನ್ನು ನೀಡುವ ಅಲಂಕಾರಗಳು ಮಾತ್ರವಲ್ಲ; ಕಾವ್ಯದ ಅರ್ಥ, ಬಂಧ ಹಾಗೂ ಪರಿಣಾಮಗಳನ್ನು ಸೂಚಿಸುವ ಸಾಧನೆಗಳಾಗಿದೆ. ಪಾತ್ರಗಳ ಮಾತು ಕ್ರಿಯೆಗಳಿಗಿಂತಲೂ ವಿಶಿಷ್ಟ ಪ್ರತಿಮೆಗಳ ಪುನರಾವರ್ತನೆ ಹಾಗೂ ಬೆಳವಣಿಗೆಗಳಲ್ಲಿ ಕಾವ್ಯದ ವಸ್ತು ಹಾಗೂ ಆ ವಸ್ತುವಿನ ಬಗೆಗಿನ ಕವಿಯ ಧೋರಣೆಯನ್ನು ಗುರುತಿಸಬಹುದು. ಈ ದೃಷ್ಟಿಯಿಂದ 'ಯಶೋಧರ ಚರಿತೆಯ ಅಭ್ಯಾಸವು ಪ್ರಯೋಜನಕರವಾಗಬಹುದು' (ಶಿವರುದ್ರಪ್ಪ : ಜಿ.ಎಸ್.( ಸಂ) 1994 . ವಿಮರ್ಶೆಯದಾರಿ. ಪು.86-87) ಗಿರಡ್ಡಿಯವರ ಮಾತುಗಳಲ್ಲಿ ರಚನಾವಾದಿ ನಿಲುವು ಎತ್ತುವ ಕೆಲವು ಪ್ರಾತಿನಿಧಿಕ ಪ್ರಶ್ನೆಗಳಿವೆ. ಈ ಮಾತುಗಳಲ್ಲಿ ಆಶಯ; ರಚನೆ: ಅರ್ಥಗಳ ಬಂಧ: ಪರಿಣಾಮ ಮುಂತಾದವುಗಳು ಬಂದಿದ್ದು ಇವು 'ಯಶೋಧರ ಚರಿತೆ' ಯನ್ನು ಹೇಗೆ ಓದಬೇಕು ಎಂದು ಪ್ರತಿ ಪಾದಿಸುತ್ತವೆ. ಆದರೆ ಇದು ಹೀಗೆಯೇ ಆಗಬೇಕೆ? ನಿರಚನದ ಪ್ರಶ್ನೆಯಿದು.

ಇದರೊಂದಿಗೆ ನವ್ಯ ವಿಮರ್ಶೆಯು ಬಳಸಿದ ಪರಿಭಾಷೆಯನ್ನು ಕೂಡಾ ನಾವು ಪರಿಶೀಲಿಸಬೇಕು. ನಮ್ಮ ವಿಮರ್ಶೆಯು ವ್ಯಂಗ್ಯ (irony) ಘರ್ಷಣಿಕೆ (tension) ವಿರೋಧಾಭಾಸ (paradox) ಇತ್ಯಾದಿ ಪರಿಭಾಷೆಗಳನ್ನು ಆಕರ್ಷಕವಾಗಿ ಬಳಸುತ್ತದೆ. ಆದರೆ ಈ ರೀತಿಯ ಪರಿಭಾಷೆಗಳು ಅಮೂರ್ತವಾದ ಯಾಂತ್ರಿಕತೆಯನ್ನು ಪ್ರತಿಪಾದಿಸುತ್ತದೆಯೆಂಬುದು ಗಮನಾರ್ಹ. ಇಷ್ಟೆಅಲ್ಲದೆ ನವ್ಯ ವಿಮರ್ಶೆಯ ಪ್ರಕಾರ ಕಾವ್ಯದ ಭಾಷೆಗೆ ಸ್ವಾಯತ್ತವಾದ ಸಾಧ್ಯತೆಗಳೂ ಇರುತ್ತದೆ. ಕನ್ನಡದ ನವ್ಯ ವಿಮರ್ಶಕರಲ್ಲಿ ಒಬ್ಬರಾದ ಎಚ್. ಎಂ. ಚನ್ನಯ್ಯನವರ ವಿಮರ್ಶೆಯ ನಿಲುವನ್ನು ಇಲ್ಲಿ ಉದಾಹರಿಸಬಹುದು:

'ಲಿಂಗವ ಪೂಜಿಸಿದ ಬಳಿಕ
ಜಂಗಮಕ್ಕಂಜಲೇ ಬೇಕು
ದಕ್ಕ ನುಂಗಿದಂತೆ ಬೆರೆದುಕೊಂಡಿರಬೇಡಿ
ಬೀಗಿ ಬೆಳೆದಗೊನೆವಾಳೆಯಂತೆ
ಬಾಗಿಕೊಂಡಿದ್ದರೆ
ಬೇಡಿದ ಪದವಿಯನೀವ ಕೂಡಲ ಸಂಗಮದೇವ'

ಇಲ್ಲಿ ಬರುವ 'ದಕ್ಕು'ಎಂಬ ಪದದ ಔಚಿತ್ಯವನ್ನು ಗಮನಿಸಬೇಕು; ಹಾಗೆಯೇ ತಕ್ಷಣ ಬರುವ ' ನುಂಗು'ಎಂಬ ಪದ. 'ದಕ್ಕು'ಎಂಬ ಪದದ ಅರ್ಥ 'ನೇರವಾದ ಗೂಟ'ಎಂದು. ಅದೇ ಅರ್ಥ ಬರುವ ಬೇರೆ ಪದವನ್ನು ಬಳಸದೆ 'ದಕ್ಕು' ಎಂಬ ಪದವನ್ನು ಬಳಸಲಾಗಿದೆ. ಈ ಪದಕ್ಕೆ 'ಅಸ್ತಿ'ಎಂಬ ಅರ್ಥವೂ ಇದೆ ಎಂಬುದು ಗಮನಾರ್ಹ. ಅ ಪದವನ್ನು ಉಚ್ಚರಿಸುತ್ತಿದ್ದಂತೆ 'ಗುಕ್ಕು' ನೆನಪಾಗಿ, ಅನ್ನದ ಗುಕ್ಕನ್ನು ನುಂಗುವಂತೆ ಗುಳಕ್ಕನೆ ದಕ್ಕನ್ನು ನುಂಗುವ ಕ್ರಿಯೆ ತೋರಿಬರುವಂತಾಗುತ್ತದೆ.

ಹಾಗೆ 'ದಕ್ಕ'ನ್ನು ಸುಂಗಿ 'ಬೆರೆದುಕೊಂಡು' ಅಹಂಕಾರದಿಂದ ಮೆರೆದರೆ, ಬಾಗುವುದನ್ನು ಕಲಿಯದೆ ಹೋದರೆ ಒಲಿಯಲಾರ ಕೂಡಲ ಸಂಗಮದೇವ. 'ಬೀಗಿ ಬೆಳೆದ ಗೊನೆಬಾಳೆ' ಎನ್ನುವಾಗ ಬಾಳೆಯ ಆರೋಗ್ಯದಿಂದ ಕೂಡಿದ, ಪುಷ್ಟಿಯಾದ ಬೆಳವಣಿಗೆಯ ಅನುಭವವಾಗುತ್ತದೆ. ಬೀಗಿ ಬೆಳೆದಿದೆ ಅದು; ಸಂಪೂರ್ಣ ಪರಿಪಕ್ವ ಸ್ಥಿತಿ ಅಲ್ಲಿದೆ ; ಎಲ್ಲ ಇದೆ ಎಂಬ ಭಾವ ಇದೆ; ಅದು 'ಬೀಗಿದ್ದರೂ' ಕೂಡ 'ಬಾಗಿ' ಕೊಂಡಿದೆ. ಹೀಗೆ 'ಬೀಗಿ' 'ಬಾಗಿ'ದ್ದರೆ 'ಬೇಡಿದ ಪದವಿಯನೀವ ಕೂಡಲಸಂಗಮದೇವ' 'ಬೀಗು' 'ಬಾಳೆ' 'ಬಾಗು' 'ಬೇಡು' ಈ ಪದಗಳ ಔಚಿತ್ಯ ಪೂರ್ಣ ಪ್ರಯೋಗದಿಂದ, ಬೀಗಿದರೂ 'ಬಾಳೆ' 'ಬಾಗಿರುವ' ಆ ಮೇಲೆ ಹಾಗಿದ್ದರೆ 'ಬೇಡಿದ ಪದವಿಯನೀವ ಕೂಡಲ ಸಂಗಮದೇವ' ಎನ್ನುವ ಭಾವದ ಬೆಳವಣಿಗೆ, 'ಬೀಗಿ'ನಲ್ಲಿ ಪ್ರಾರಂಭವಾಗಿ 'ಬೇಡು' ವಿನಲ್ಲಿ ಇಳಿದು 'ಕೊಡು'ವಲ್ಲಿ ಕೊನೆಯಾಗುತ್ತದೆ. 'ಬೀಗಿ' ದಲ್ಲಿನಿಂದ 'ಬಾಗು'ವಲ್ಲಿನ ಕ್ರಿಯೆ ಕಣ್ಣು ಮುಂದೆ ಕಟ್ಟುತ್ತದೆ.

ಇದು ವಚನದ ಮೊದಲ ಭಾಗವಾದ ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು ಎನ್ನುವುದಕ್ಕೆ ಸೇರಿಕೊಂಡು, ಜಂಗಮಕ್ಕೆ ಬಾಗ ಬೇಕು, ಕೂಡಲ ಸಂಗಮ ಒಲಿಯಬೇಕಾದರೆ, ಎಂಬ ಭಾವ ಪುಷ್ಟಿ ಗೊಳ್ಳುತ್ತದೆ. (ಜಿ.ಎಸ್. ಶಿವರುದ್ರಪ್ಪ (ಸಂ).1994 ವಿಮರ್ಶೆಯದಾರಿ ಪು. 52-53, ) ಇಲ್ಲಿ ಚೆನ್ನಯ್ಯನವರು ಬಳಸಿಕೊಳ್ಳುವ ಪರಿಕರವು ನವ್ಯ ವಿಮರ್ಶೆಯದಾಗಿದ್ದು ವಚನವೊಂದರಲ್ಲಿ ಇರುವ ಪದದ ಬಗೆಗಿನ tensionಗಳಿಗೆ ಹೆಚ್ಚಿನ ಅವರು ಒತ್ತನ್ನು ಕೊಟ್ಟಿದ್ದಾರೆ. ಚೆನ್ನಯ್ಯನವರು ಈ ವಚನದ ಭಾಷೆಯು ದಿನನಿತ್ಯದ ಭಾಷೆಯ ಮಾದರಿಯಲ್ಲಿ ಇಲ್ಲ, ಭಾಷಿಕ ಕ್ರಮಕ್ಕೆ ವಿಶಿಷ್ಟಸಂಕೇತವಿದ್ದು ಭಿನ್ನವಾದ ಪ್ರಸಕ್ತಿಯು ರೂಪುಗೊಂಡಿದೆಯೆಂದು ಪರಿಭಾವಿಸುತ್ತಾರೆ. ವಚನವೊಂದರ ಭಾಷೆಯು ಅದರೊಳಗಡೆಗೆ ಸ್ವಾಯತ್ತವಾಗಿದ್ದು, ಕೃತಿಯನ್ನು ಹೆಚ್ಚು ನಿಕಟವಾಗಿ ಓದುವುದರ ಮುಖಾಂತರ 'ನಿರ್ದಿಷ್ಟ ಅರ್ಥವನ್ನು' ಭಿನ್ನವಾಗಿ ಗ್ರಹಿಸಬಹುದು ಎಂದು ಭಾವಿಸಿಕೊಂಡಂತಿದೆ.

ನವ್ಯ ವಿಮರ್ಶೆಯು ಅನುಭವ ಮತ್ತು ಭಾಷೆಯ ನಡುವಣ ಸಂಬಂಧವನ್ನು ಕುರಿತು ಪ್ರಸ್ತಾವಿಸಿದ್ದು ಸರಿಯಷ್ಟೇ. 'ಭಾಷೆಯ ಅರ್ಥಶಕ್ತಿಯನ್ನು ನವ್ಯಕಾವ್ಯವು ಪುನರ್ರಚಿಸಿಕೊಳ್ಳುವುದಕ್ಕೆ ಕಾರಣವಿದೆ. ವ್ಯಾವಹಾರಿಕ ಭಾಷೆ ಸಮೂಹದ ಭಾಷೆ. ಅದು ಪ್ರಜ್ಞಾಪೂರ್ವಕ ನೆಲೆಯ ಭಾವ, ಅನುಭವಗಳ ಅಭಿವ್ಯಕ್ತಿಗೆಯ ಬಳಕೆಯಾಗುವ ಭಾಷೆ. ವ್ಯಕ್ತಿವಿಶಿಷ್ಟವಾದ ಅನುಭವವನ್ನು ಅದರೆಲ್ಲಾ ಸಂಕೀರ್ಣತೆಯಲ್ಲಿ ಅಭಿವ್ಯಕ್ತಿಸಬೇಕಾದ ಒತ್ತಡ ಅದಕ್ಕೆ ಇರುವುದಿಲ್ಲ. ಆದ್ದರಿಂದ ವ್ಯಕ್ತಿ ವಿಶಿಷ್ಟವಾದ ಅನುಭವವನ್ನು ಅದರಲ್ಲಿ 'ಶಂಕೆ' 'ಸಂದಿಗ್ಧ,' 'ಸಮ್ಮೋಹ'ಗಳ ಸಂಕೀರ್ಣತೆ, ನಿಗೂಢತೆಗೊಂದಿಗೆ ಅಭಿವ್ಯಕ್ತಿಸುವ ಸೃಜನಶೀಲಳ ಒತ್ತಡ ಕವಿಗೆ ಉಂಟಾದಾಗ ಭಾಷೆಯ ವ್ಯಾವಹಾರಿಕ ಅರ್ಥಶಕ್ತಿಯು ತಕ್ಷಣ ಸಾಲದಾಗುತ್ತದೆ'. ( ಜಿ. ಎಚ್. ನಾಯಕ್. ಹೊಸಗನ್ನಡ ಕವಿತೆ ಸಂಕಲನದ ಮುನ್ನುಡಿಯಿಂದ.) ಜಿ. ಎಚ್. ನಾಯಕರು ತಮ್ಮ ಮಾತುಗಳಲ್ಲಿ 'ಅನುಭವ' 'ವ್ಯಾವಹಾರಿಕ ಭಾಷೆ' 'ಕಾವ್ಯಭಾಷೆ' ಇತ್ಯಾದಿಗಳನ್ನು ತರುತ್ತಾರೆ. ಆ ಅನುಭವ ಎನ್ನುವುದಕ್ಕೆ ಅವರು ಒಂದು ಮಿತಿಯನ್ನೂ ಹೇರುತ್ತಾರೆ. ಕಾವ್ಯ ಭಾಷೆಬೇರೆ-ವ್ಯಾವಹಾರಿಕ ಭಾಷೆ ಬೇರೆ - ಅನುಭವ ಬೇರೆಯೆಂಬ ಈ ರೀತಿಯ ಪರಿಕಲ್ಪನೆಗಳನ್ನು ನಿರಚನವು ತಿರಸ್ಕರಿಸುತ್ತದೆ.

ನಿರಚನ ಸಿದ್ಧಾಂತವು ಈ ರೀತಿಯ ತೀರ್ಪಿನ ವಿರುದ್ಧ ನಿಲ್ಲುತ್ತದೆ. 'ನಿಶ್ಚಿತವಾದುದು' ಎಂಬುದಕ್ಕಿಂತ 'ಅನಿಶ್ಚಿತತೆ'ಯೆನ್ನುವುದೇ ನಿರಚನದ ಪ್ರಕಾರ ಪಠ್ಯದ ಮುಖ್ಯ ನೆಲೆಯಾಗಿರುತ್ತದೆ. ಒಂದರ ನಂತರ ಮತ್ತೊಂದು ಎಂಬ ಪರಿಕಲ್ಪನೆಯನ್ನು ನಿರಚನವು ಛೇದಿಸುತ್ತದೆ. ರಚನಾವಾದಿಗಳು ವಸ್ತುವನ್ನು ಒಂದು ರಚನಾಕ್ರಮದ ಒಳಗಡೆಗೆ ಪುನರ್ ನಿರ್ಮಾಣ ಮಾಡುತ್ತಾರೆ. ಛೇದಿಸುವುದಿಲ್ಲ. ರಚನೆಯೆನ್ನುವುದು ಹಲವು ಅಂಶಗಳು ಸೇರಿಕೊಂಡು ಹುಟ್ಟಿರುವ ಪರಿಕ್ರಮವಾಗಿದೆ. ಹೀಗಾಗಿ ಈ ಅಂಶಗಳನ್ನು ಒಡೆದು

ಒಂದು ಘಟಕವಾಗಿ ಪರಿಶೀಲಿಸಲು ಬರುವುದಿಲ್ಲ. 'ರಚನಾಕ್ರಮದ ಏಕತೆ' ಯೆಂಬುದು ಅನೇಕ ಅಂಶಗಳು ಪರಸ್ಪರ ಸಹಯೋಗದಿಂದ ರೂಪಿತವಾಗಿರುವ ಪರಿಕಲ್ಪನೆಯಾಗಿದೆ. ರಚನಾವಾದಿಗಳು ತಮ್ಮ ಚರ್ಚೆಯನ್ನು ಪ್ರಾರಂಭಿಸುವಾಗ ಅದಕ್ಕೆ ಅರಿಸ್ಟಾಟಲ್‌ನ ವಾದದಲ್ಲಿ ತಮ್ಮ ಬೇರುಗಳನ್ನು ಕಂಡುಕೊಳ್ಳುವುದು ಸರಿಯಷ್ಟೆ? ಅರಿಸ್ಟಾಟಲ್ ' ದುರಂತ ನಾಟಕವೆಂದರೆ ' 'ಕ್ರಿಯೆ'ಯ ( action) ಗಂಭೀರ ಅನುಕರಣೆಯಾಗಿರುತ್ತದೆ. ಅದು ಅದರಷ್ಟಕ್ಕೆ ಪರಿಪೂರ್ಣವಾಗಿರುತ್ತದೆ. ಅದರಲ್ಲಿಯೂ ಘಟನೆಗಳು ಕರುಣೆ; ಭಯ, ಮೊದಲಾದ ಅಂಶಗಳನ್ನು ಹೊಂದಿಕೊಂಡಿರುತ್ತದೆ ಇದರೊಂದಿಗೆ ಅರಿಸ್ಟಾಟಲ್ ಕ್ರಿಯೆ; ಕಾಲ; ಸ್ಥಳಗಳ ಐಕ್ಯತೆಯ ಬಗೆಗೂ ವಿವರಿಸಿದ್ದಾನೆ. 'ಕೆಥಾರ್ಸಿಸ್ ಸಿದ್ಧಾಂತ'ವನ್ನು ಮಂಡಿಸುವಾಗ ಅರಿಸ್ಟಾಟಲ್ ಕೊಡುವ ಕೆಲವು ವಿವರಗಳು ಗಮನಾರ್ಹವಾಗಿದೆ. ಈ ಕೆಥಾರ್ಸಿಸ್ ಸಿದ್ಧಾಂತದ ಪರಿಕಲ್ಪನೆಯಾದರೂ ವೈದ್ಯಕೀಯ ಪರಿಭಾಷೆಯನ್ನು ಒಳಗೊಂಡಿದ್ದರೂ ಅದು ಭಾವನೆಗಳ ಕುರಿತಾದ್ದಾಗಿದೆ. 'ಒಬ್ಬ ವೈದ್ಯ ಕೊಡುವ ಔಷಧ ದೇಹದ ವ್ಯಾಧಿಯನ್ನು ಪರಿಹರಿಸುವಂತೆ ಅಂತರಂಗದ ಭಾವ ಪ್ರಪಂಚಕ್ಕೆ ಸಂಬಂಧಿಸಿದ ವಿಕಾರಗಳನ್ನು ಉತ್ತಮ ಕಾವ್ಯದಲ್ಲಿಯ ತೀವ್ರವಾದ ಭಾವಾನುಭವ ಪರಿಹರಿಸುತ್ತದೆ. ಔಷಧದ ಮೂಲಕ ದೇಹಸ್ಥಿತಿಯಲ್ಲಿ ಸಮತೂಕ ಸಿದ್ಧಿಸುವಂತೆ ಭಾವಾನುಭವದ ಮೂಲಕ ಅಂತರಂಗದಲ್ಲಿಯೂ ಒಂದು ಬಗೆಯ ಸಮಸ್ಥಿತಿ ಸಿದ್ಧಿಸುತ್ತದೆ. ಅಂಥ ಸಮಸ್ಥಿತಿಯೇ ರುದ್ರನಾಟಕ ಒದಗಿಸುವ ಮನಃ ಸಮಾಧಾನ'. ಇದು ಕೆಥಾರ್ಸಿಸ್ ಸಿದ್ಧಾಂತದ ವಿವರಣೆ . ರಚನಾವಾದಿಗಳಿಗೆ ಅರಿಸ್ಟಾಟಲ್ ಹೇಳುವ ' ಐಕ್ಯದ' ಬಗೆಗಿನ ವಿವರಗಳು ಮತ್ತು ಕೆಥಾರ್ಸಿಸ್‌ನ ಪರಿಕಲ್ಪನೆಗಳು ಮುಖ್ಯವಾಗಿವೆ. ರಾಚನಿಕ ಪರಿಕ್ರಮದಲ್ಲಿ ' ವಿಷಯ ' ಮತ್ತು 'ವಸ್ತು'ವಿನ ನಡುವಣ ದ್ವಂದ್ವದ ಕಲ್ಪನೆಯು ಮುಖ್ಯವಾಗಿರುವುದರಿಂದ ಈ ರೀತಿಯ ಚರ್ಚೆಗಳಿಗೆ ಮೂಲ ನೆಲೆಯನ್ನು ಅರಿಸ್ಟಾಟಲ್‌ನ ಮೂಲಕ ರಚನಾವಾದಿಗಳು ಕಂಡುಕೊಳ್ಳುತ್ತಾರೆ.

ಫ್ರಾಯ್ಡನ ಮನೋವೈಜ್ಞಾನಿಕ ವಿಶ್ಲೇಷಣೆಯ ಸಂದರ್ಭದಲ್ಲಿ 'ನಾರ್ಸಿಸಸ್' ಮತ್ತು 'ಈಡಿಪಸ್'ನ ಚರ್ಚೆಗಳು ಬಂದುವಷ್ಟೆ; ಈ ವಿಶ್ಲೇಷಣೆಗಳು ಕೂಡಾ ರಾಚನಿಕ ವಿಧಾನಗಳನ್ನು ಅವಲಂಬಿಸಿದೆ. ಮನುಷ್ಯನ ಚಟುವಟಿಕೆಯನ್ನು ಈ ಪರಿಭಾಷೆಗಳು ವಿವರಿಸುವಾಗ ಸಂಕೇತದ ರಚನಾ ಕ್ರಮದ ವಿನ್ಯಾಸ ಅಥವಾ ಸಂಕೇತಗಳು ನಿರ್ದಿಷ್ಟ ರಚನೆಯ ಪರಿಕ್ರಮದಲ್ಲಿ ರೂಪುಗೊಂಡ ಬಗೆಯನ್ನು ವಿವರಿಸುತ್ತದೆ.

ಇದರ ಜೊತೆಗೆ ಗಮನಿಸಬೇಕಾದ ಅಂಶವೆಂದರೆ, ತುಂಬಾ ವಿಶಾಲವಾದ ಅರ್ಥದಲ್ಲಿ ರಚನಾವಾದದ ವಿವರಣೆಯು ನಮ್ಮ ಮೇಲೆ ಪ್ರಭಾವವನ್ನು ಬೀರಿದೆ. (ರಚನಾಕ್ರಮದ ಬಗೆಗೆ ಅರಿಸ್ಟಾಟಲ್ ಮತ್ತು ಪ್ಲೇಟೋ ಹೇಳಿರುವ ವಿವರಗಳು ನಮ್ಮನ್ನು ವ್ಯಾಪಿಸಿಕೊಂಡಿವೆ). ಆದರೆ ನೇರವಾದ ಅರ್ಥದಲ್ಲಿ ಆಧುನಿಕ ರಚನಾವಾದದ ಸಂದರ್ಭದಲ್ಲಿ, ನಾವು ರಷ್ಯನ್ ರೂಪನಿಷ್ಠರು, ಲೆವಿಸ್ಟ್ರಾಸ್ ಮಾನವಶಾಸ್ತ್ರದಲ್ಲಿ, ಸಸೂರ ಭಾಷಾ ವಿಜ್ಞಾನದಲ್ಲಿ ಎಂದು ಹೆಸರಿಸುತ್ತೇವೆ. ರೂಪನಿಷ್ಠರು ಸಂಕೇತಕೇಂದ್ರಿತ ವಿಮರ್ಶೆಯ ಬಗ್ಗೆ ಪ್ರತಿಕ್ರಿಯಿಸುತ್ತಾರೆ. ರೂಪನಿಷ್ಠರು ಸಾಹಿತ್ಯದ ಅನನ್ಯತೆಯನ್ನು ಸಾಹಿತ್ಯದ ಒಳಗಡೆಗೆ ವಿವರಿಸುವುದು ಮಾತ್ರವಲ್ಲದೆ ಸಾಹಿತ್ಯ ಕೃತಿಯೆನ್ನುವುದು ಸ್ವಯಂ ಸಂಪೂರ್ಣ ರಚನೆಯೆಂದು ಪರಿಭಾವಿಸುತ್ತಾರೆ. ಕೃತಿಯೇ ಒಂದು ಕೇಂದ್ರವೆಂದು ಪರಿಭಾವಿಸುವುದು ರೂಪನಿಷ್ಠರ ಚರ್ಚೆಯ ಪ್ರಮುಖ ಪರಿಕಲ್ಪನೆಯಾಗಿದೆ. ಆದರೆ ಈ 'ಕೇಂದ್ರದ' ಕಲ್ಪನೆಯೇ ನಿರಚನದ ನೆಲೆಯಿಂದ ಚರ್ಚಾರ್ಹವಾದುದು.

ರಚನಾವಾದವು ಭಾಷಾ ವಿಜ್ಞಾನದ ಮೇಲೆ ಬೀರಿರುವ ಪರಿಣಾಮಗಳು ಗಮನಾರ್ಹವಾಗಿದೆ. ರಚನಾವಾದಿ ದೃಷ್ಟಿಕೋನ ಭಾಷಾವಿಜ್ಞಾನಿಗಳ ಮುಖ್ಯ ಗಮನವು ಒಂದು ವಾಕ್ಯದ ರಚನಾಕ್ರಮವನ್ನು

ಅವಲಂಬಿಸಿಕೊಂಡಿದೆ. ದೃಷ್ಟಿಕೋನದ ಪ್ರಕಾರ ಒಂದು ನಿರ್ದಿಷ್ಟ ವಾಕ್ಯದ ಹಿಂದಿರುವ ನಿಯಮ ಮತ್ತು ಅದರ ಅಭಿವ್ಯಕ್ತಿರೂಪವು ಮುಖ್ಯವಾಗಿರುತ್ತದೆ. 'ನೀರೇ ನೀರೀಲಿ ನಡೆವಾಗ ನೀರಿಗೆ ಚೆಲ್ಲಾಟ' ಈ ವಾಕ್ಯವು ಸಂಯೋಜನೆಗೊಂಡ ಕ್ರಮವನ್ನು ನೋಡಿ: 'ನೀರೇ' 'ನೀರೀಲಿ' ನಡೆವಾಗ (ಕ್ರಿಯಾಪದ) 'ನೀರೀಗಿ' 'ಚೆಲ್ಲಾಟ', ಈ ರೀತಿಯ ಬಿಡಿಯಾದ ಪದಗಳು ಸೇರಿಕೊಂಡು ಒಂದು ಕೇಂದ್ರ ಆಶಯವನ್ನು ನಿರೂಪಿಸುತ್ತದೆ.

ಟ್ರಾಬಿಸ್ಟ್ಯಕಾಯ ಒಂದು 'ಧ್ವನಿಮಾದ' ಬದಲಾವಣೆಯಿಂದ ಅರ್ಥಗಳಲ್ಲಿ ಹೇಗೆ ಬದಲಾವಣೆಯುಂಟಾಗುತ್ತದೆಯೆಂದು ಪರಿಶೀಲಿಸುತ್ತಾನೆ.

ಉದಾ:- ಅವನು ಪೇಟೆಗೆ ಹೋದನು

ಅವಳು ಪೇಟೆಗೆ ಹೋದಳು:

'ನು' ಮತ್ತು 'ಳು' ವಿನ ನಡುವಿನ ವ್ಯತ್ಯಾಸವು ಅರ್ಥದ ದೃಷ್ಟಿಯಿಂದ ಪ್ರಧಾನ ವ್ಯತ್ಯಾಸವನ್ನು ಉಂಟುಮಾಡಿದೆ. ಅವನ ಬದಲು ಅವಳು ಪೇಟೆಗೆ ಹೋಗಿದ್ದಾಳೆ. 'ಪೇಟೆ' ಮತ್ತು 'ಹೋಗುವ' ಕ್ರಿಯೆ ಒಂದೇ. ಆದರೆ ಹೋದವರು ಮಾತ್ರ ಬೇರೆ.

ಸಸೂರನು ರಚನೆಯನ್ನು ಭಾಷಿಕ ಸಂಜ್ಞೆಯ ಮೂಲಕ ಚರ್ಚಿಸುತ್ತಾನೆ. ಭಾಷಿಕ ಸಂಜ್ಞೆಯ ಸೂಚಕ ಮತ್ತು ಸೂಚಿತನ ನಡುವೆ ನಿರ್ದಿಷ್ಟವಾದ ಸಂಬಂಧವನ್ನು ಕಲ್ಪಿಸುತ್ತದೆ. 'ಒಂದು ಶಬ್ದ ಹಾಗೂ ಅದು ಸೂಚಿಸುವ ವಸ್ತುಗಳ ನಡುವೆ ಯಾವುದೇ ಬಗೆಯ ತಾರ್ಕಿಕ ಅಥವಾ ಅರ್ಥಪೂರ್ಣ ಸಂಬಂಧವಿಲ್ಲ. ಅವುಗಳ ಸಂಬಂಧ ಯಾದೃಚ್ಛಿಕವಾದುದು. ಭಾಷೆಯಲ್ಲಿ ವಸ್ತು ನಿರ್ದೇಶನ ಕೇವಲ ರೂಢಿಗತ ಹಾಗೂ ಸಾಂಕೇತಿಕ'. (ಸಿ.ಎನ್. ರಾಮಚಂದ್ರನ್ 1989 ಪು 101) ಭಾಷಾ ವಿಜ್ಞಾನದಲ್ಲಿ ರಾಚನಿಕ ಮಾದರಿಯ ಚರ್ಚೆಯು ಹಾಗೂ ಸಂಕೇತಶಾಸ್ತ್ರದ ಪರಿಭಾಷೆಯನ್ನು ಒಳಗೊಂಡು ರೂಪುಗೊಂಡಿದೆ. ಸಸೂರನ ರಾಚನಿಕ ದೃಷ್ಟಿಕೋನವನ್ನು ಹೀಗೆ ಸಂಗ್ರಹಿಸಿ ಹೇಳಬಹುದು: ಒಂದು ರಚನೆಯ ಅಥವಾ ವ್ಯವಸ್ಥೆಯ ಕುರಿತು ಚರ್ಚಿಸುವುದೆಂದರೆ ಅದರ ಅಂತರ್ಗತ ನಿಯಮಗಳನ್ನು ಪರಿಶೀಲಿಸುವುದು ಎಂದು ಮಾತ್ರ ಅರ್ಥ. ಎರಡನೆಯದಾಗಿ ಸೂಚಕ ಸೂಚಿತ ಸಂಬಂಧವು ಯಾದೃಚ್ಛಿಕವಾದುದು. 'ಸೂಚಿತ' ಬದಲಾಗುತ್ತಾ ಹೋಗುವುದರಿಂದ ನಮ್ಮ ಅಭ್ಯಾಸ ಸೂಚಕಗಳಿಗೆ ಮಾತ್ರ. ಮೂರನೆಯದಾಗಿ ಭಾಷಿಕ, ಸಾಂಜ್ಞಿಕ ಮೌಲ್ಯ ಅದರ ಧ್ವನಿ ಶಾಬ್ದಿಕ ಪರಿಸರನ್ನು ಅವಲಂಬಿಸಿರುವುದರಿಂದ ಒಂದು ರಚನೆಯಲ್ಲಿ ಕ್ರಮ - ರೀತಿಗಳು ಇರುತ್ತವೆಯೇ ಹೊರತು ವಾಸ್ತವದ ಅಂಶಗಳಲ್ಲ. ಸಸೂರನ ಪ್ರಕಾರ 'ಭಾಷೆ ಒಂದು ರೂಪವೇ ಹೊರತು ಸತ್ಯವಲ್ಲ' ( ವಿವರಗಳಿಗೆ ನೋಡಿ: ಸಿ. ಎನ್. ರಾಮಚಂದ್ರನ್ 1989 ಪು 101 ರಿಂದ 103)

ಟ್ರಾಬಿಟ್ಸ್‌ಕಾಯ್ ಕುರಿತಂತೆ 'ನಿರಚನವಾದಿ' ಡೆರಿಡಾ ಈ ಕೆಳಗಿನಂತೆ ಪ್ರತಿಕ್ರಿಯಿಸಿರುವುದರುವುದು ರಚನಾವಾದ ಮತ್ತು ನಿರಚನವಾದದ ಸಂಬಂಧಾಂತರಗಳನ್ನು ಸೂಚಿಸುತ್ತದೆ.

1. ರಾಚನಿಕ ಕ್ರಮವು ಪ್ರಜ್ಞಾಪೂರ್ವಕವಾದ ಭಾಷಿಕ ಕ್ರಮದಿಂದ ಅಪ್ರಜ್ಞಾಪೂರ್ವಕವಾದ ಭಾಷಿಕ ರಚನಾಕ್ರಮದ ಕಡೆಗೆ ಜಿಗಿಯುವುದು.
2. ಪದಕ್ಕಿರುವ ಸ್ವತಂತ್ರ ಅನನ್ಯತೆಯನ್ನು ಪ್ರಶ್ನಿಸಿ ಪದಗಳಿರುವ ಪರಸ್ಪರ ಸಂಬಂಧವನ್ನು ವಿವರಿಸುತ್ತದೆ. ಅಂದರೆ ಒಂದು ಪದವು ವಾಕ್ಯದ ಸಂಯೋಜನೆಯಲ್ಲಿ ವಿಶಿಷ್ಟಸ್ಥಾನವನ್ನು ಪಡೆದುಕೊಳ್ಳುತ್ತದೆ.

3. ಒಂದು ಪದ್ಧತಿಯ ಒಳಗಡೆಗೆ ಇರುವ ಪರಿಕಲ್ಪನೆಯನ್ನು ಅದು ಹೇಳುತ್ತದೆ.

4. ಸಾಮಾನ್ಯವಾದ ನಿಯಮವನ್ನು ಶೋಧಿಸುವುದು ಅದರ ಮುಖ್ಯ ಆಸಕ್ತಿಯಾಗಿದೆ.

ಒಟ್ಟಿನಲ್ಲಿ ಡೆರಿಡಾನು ಹೀಗೆ ರಚನಾವಾದದ ನೆಲೆಗಳಿಗೆ ಪ್ರತಿಕ್ರಿಯಿಸುತ್ತಾನೆ. ರಚನೆಯ ನಿಷ್ಠತೆಯು ಕೂಡಾ ಸಾಮಾನ್ಯವಾದ ನಿಯಮವನ್ನು ಅವಲಂಬಿಸಿಕೊಂಡಿದೆ. ಹೀಗಾಗಿ ರಚನಾವಾದದಲ್ಲಿ ಸ್ವಂತಿಕೆ ಇರಬಹುದು. 'ವ್ಯತ್ಯಾಸ' ಎನ್ನುವುದು ಮುಖ್ಯ ಪರಿಕಲ್ಪನೆಯಾಗಿಲ್ಲ. ಅದರೊಂದಿಗೆ 'ಸ್ವ - ಅನನ್ಯತೆ' ಎನ್ನುವುದರ ಬಗ್ಗೆ ರಚನಾವಾದಿಗಳು ಚರ್ಚಿಸುವುದಿಲ್ಲ. ಅವರಿಗೆ ಅದು ಮುಖ್ಯವಲ್ಲ. ಪದದಲ್ಲಿ ಬಳಕೆಯಾಗುವ ಒಂದೊಂದು ಸ್ವರಕ್ಕೂ ಸ್ವ-ಅನನ್ಯತೆಯೆಂಬುದು ಇರುತ್ತದೆ.

ಮರ

ರಮ

ಈ ಮೇಲಿನ ಪದಗಳ ಜೋಡಿಯಲ್ಲಿ 'ರ' ವು ಸ್ಥಾನಪಲ್ಲಟ ಹೊಂದಿರುವುದರಿಂದ ಹೊಸ ಅರ್ಥವನ್ನು ಕೊಟ್ಟಿದೆ. 'ಮರ' ನಾಮ ಪದವಾದರೂ ಅದು ಮೂಲತ: 'ಮರದ' ಪರಿಕಲ್ಪನೆಯನ್ನು : 'ಮರದ' ಅನುಪಸ್ಥಿತಿಯನ್ನು ಸೂಚಿಸುತ್ತದೆ.

ರಚನಾವಾದಿಗಳು 'ವಿಷಯ'ವನ್ನು 'ವಸ್ತು'ವನ್ನು ವಿಭಜಿಸುತ್ತಾರೆ. ವಿಷಯಕ್ಕೂ ವಸ್ತುವಿಗೂ ದ್ವಂದ್ವಾತ್ಮಕವಾದ ನಿಲುವು ಇರುತ್ತದೆಯೆಂದು ಅವರು ನಂಬುತ್ತಾರೆ.

ರಚನಾವಾದಿಗಳ ಅಂತಿಮ ನಿಲುವೆಂದರೆ, 'ಪ್ರತಿಯೊಂದು ರಚನೆಯೂ ನಿರ್ದಿಷ್ಟವಾದ ವಸ್ತುವನ್ನು' ತನಗೆ ಬೇಕಾದ ಕ್ರಿಯಾತ್ಮಕ ಸ್ವರೂಪವನ್ನು ಹೊಂದಿರುತ್ತದೆ'. ಇಲ್ಲಿ ಬಳಕೆಯಾದ ನಿಲುವನ್ನು ಗಮನಿಸಿ: ರಚನೆಯು ವಸ್ತುವಿನ ಜೊತೆಗೆ ತನ್ನ ನಿಲುವನ್ನು ಸ್ಥಾಪಿಸಿಕೊಂಡಿರುತ್ತದೆ. ವಸ್ತುವಿಗೆ ರಚನೆಯ ಒಳಗಡೆಗೆ ಕ್ರಿಯಾತ್ಮಕವಾದಿ ಸ್ವರೂಪವಿರುತ್ತದೆ. ಡೆರಿಡಾನ ಪ್ರಕಾರ 'ಅಂತರ್ ಪಠ್ಯ' ಎನ್ನುವುದು ಕೇವಲ ವಸ್ತುವಿನ ಹಾಜರಾತಿ ಅಲ್ಲ. ವಿಷಯಕ್ಕೂ ವಸ್ತುವಿಗೂ ಬಹಳ ಅಂತರವಿದೆಯೆ? ಅಥವಾ ವಿಷಯವು ಬೇರೆ ವಸ್ತುವು ಬೇರೆ ಎಂದು ಒಡೆದು ಹೇಳುವುದು ಸಾಧ್ಯವೆ? ಒಂದು ವಸ್ತುವು ರಚನಾಕ್ರಮದಲ್ಲಿ ಹಾಜರಾಗುತ್ತದೆಯೆಂದು ಭಾವಿಸೋಣ, ವಸ್ತುವು ರಚನಾ ಕ್ರಮದಲ್ಲಿ ಹಾಜರಾಗುವುದಕ್ಕೆ ಏನು ಕಾರಣ ಎನ್ನುವ ಪ್ರಶ್ನೆಯನ್ನು ಕೇಳಬೇಡವೆ?.

ರಚನಾವಾದಿ ಚರ್ಚೆಯಲ್ಲಿ 'ಸಂವಹನ' ಎನ್ನುವ ಪರಿಭಾಷೆ ಬಳಕೆಯಾಗಿದೆ. ಇದು ಒಂದು ರೀತಿಯಿಂದ 'ಹುಡುಕಾಟ'ದ ಮುಖ್ಯ ಪರಿಕರವೂ ಅಗಿದೆ. ಒಂದು ರಚನಾಕ್ರಮದ ಒಳಗಡೆಗೆ ಬರುವ ವಸ್ತುವಿನ ನಿಜವಾದ ಅರ್ಥವೇನು ಎಂದು ಹುಡುಕುವುದು ಅಥವಾ ಒಂದು ಭಾಗದಲ್ಲಿ ಬರುವ ಪರಿಕಲ್ಪನೆಯೇನು ಎಂದು ತಿಳಿಯುವುದು ಮತ್ತು ಅದನ್ನು 'ಬಗೆ'(operation) ಯುವುದು ರಚನಾವಾದ ಗ್ರಹಿಕೆಯ ಕ್ರಮವಾಗಿದೆ. ಈ ರೀತಿಯ ಕ್ರಮದ ಬಗ್ಗೆ ಬಾರ್ತ್ಸ್ ಹೇಳುವ ಪ್ರತಿಕ್ರಿಯೆಯು ಕುತೂಹಲಕಾರಿಯಾಗಿದೆ. ' ನಿರ್ದಿಷ್ಟ ವಸ್ತುವಿನ ಜ್ಞಾನವೊಂದನ್ನು ಭಾಷಿಕ ಸಂಜ್ಞೆಯು ಸೂಚಿಸುತ್ತದೆಯೆಂದು ಭಾವಿಸುವುದಕ್ಕಿಂತ ಒಂದು ವಸ್ತುವಿನ ದರ್ಶನವನ್ನು ಒಂದು ಸಂಜ್ಞೆಯು ಸೂಚಿಸುತ್ತದೆ ಎಂದು ಹೇಳುವುದು ಸೂಕ್ತ' ರಚನಾವಾದವು ಕೆಲವು ಸರಳ ದ್ವಂದ್ವನಿಲುವನ್ನು ಆಧರಿಸಿ ಕೊಂಡು ನಿಂತಿದೆಯಷ್ಟೆ?

ಸೂಚಕ - ಸೂಚಿತ
ಭಾವನಾತ್ಮಕ- ಬೌದ್ಧಿಕ
ಬರವಣಿಗೆ - ಮಾತು
ಅವಕಾಶ- ಕಾಲ
ನಿಷ್ಕ್ರಿಯ - ಕ್ರಿಯಾತ್ಮಕ.

ಈ ರೀತಿಯ ಸರಳ ದ್ವಂದ್ವದ ನಿಲುವಿನಿಂದಾಗಿ ರಚನಾವಾದವು ಕೆಲವು ತೊಡಕುಗಳನ ಎದುರಿಸಿದೆ. ಈ ನಿಲುವಿನಿಂದಾಗಿ ಎರಡು ವರ್ಗೀಕರಣಗಳು ಏರ್ಪಡುವುದರ ಜೊತೆಗೆ ಪ್ರತ್ಯೇಕತವಾ ಚೌಕಟ್ಟುಗಳು ಬಂದುಬಿಡುತ್ತವೆ. ವಾಸ್ತವವಾಗಿ ಹಾಗಿರುವುದಿಲ್ಲ ಎನ್ನುವುದು ನಿರಚನ ವಾದಿತಿರುಳು

ಡೆರಿಡಾ ವ್ಯಾಕರಣದ ಬಗ್ಗೆ ಮಾತಾಡುವಾಗ ಕೆಲವು ವಾದಗಳನ್ನು ಮಂಡಿಸುತ್ತಾನೆ. (ಡೆರಿಡ ಕೂಡಾ ಭಾಷಿಕ ಸಂಜ್ಞೆಗಳನ್ನು ಆಧರಿಸುತ್ತಾನೆ). ರಚನೆಯ ನಿರಚನೆಯೆನ್ನುವುದು ಎಲ್ಲಾ ರೀತಿಯ ಪಠ್ಯಗಳ ನಿರಚನೆಯೂ ಆಗಿರುತ್ತದೆ. ನಿರ್ದಿಷ್ಟಗೊಳಿಸಲಾಗಿರುವ; ಅಥವಾ 'ಹೇರಲಾಗಿರುವ' ಸಂಗತಿಗಳನ ನಿರಚನೆಯು ನಿರಾಕರಿಸುತ್ತದೆ. ಒಂದು ವಾಕ್ಯದಲ್ಲಿ ಬಳಕೆಯಾಗಿರವ ಭಾಷಿಕ ಸಂಜ್ಞೆಯನ ಪರಿವರ್ತಿಸಿಕೊಳ್ಳಲು ಸಾಧ್ಯ ಅಥವಾ ತೊಡೆದು ಹಾಕಲು ಸಾಧ್ಯ. ಈ ಅರ್ಥದಲ್ಲಿ ಡೆರಿಡಾ ಕೂಡ ರಾಚನಿಕ ವಿಧಾನದ ಜೊತೆಗೆ ಸಂಬಂಧವನ್ನು ಇರಿಸಿಕೊಂಡಿದ್ದಾನೆ.

ನೀಶೆಯ ವಾದವನ್ನು ಪುಷ್ಟೀಕರಿಸಿದ ರೊಲೆಂಡ್‌ಬಾರ್ತಸ್ ಕೂಡಾ ಈ ವಾದವನ್ ಪುಷ್ಟೀಕರಿಸಿದ್ದಾನೆ. ನೀಶೆಯ ವಾಕ್ಯವು ಹೀಗಿದೆ; 'ಮನುಷ್ಯನು ಯಾವುದನ್ನದರೂ ಕೇಳುವಾಗ ಅ ರಚನೆಯಿರುತ್ತದೆ. ಇದು ಸ್ಥಗಿತಗೊಂಡ; ನಿಜವಾದ ಅರ್ಥವಂತಿಕೆಯನ್ನು ಒಳಗೊಂಡಿರುವ ಯಾಂತ್ರಿ ಪ್ರತಿಕ್ರಿಯೆಯಲ್ಲ. ಮನುಷ್ಯನು ಅರ್ಥವನ್ನು ಸೃಷ್ಟಿಸುತ್ತಾನೆ' ?

ಡೆರಿಡಾನ ಪ್ರಕಾರ 'ನಿರ್ದಿಷ್ಟ ರಚನೆಯ ವಸ್ತುವನ್ನು ಶೋಧಿಸುವಾಗ ಮಾತ್ರ ರಚನಾವಾದ ಕೆಲಸ ಮುಗಿಯುತ್ತದೆಯೆಂದು ಭಾವಿಸಬೇಕಾಗಿಲ್ಲ. ಅಥವಾ ಭಾಷೆಯ ರಚನೆಯಲ್ಲಿ ವಸ್ತುವಿದೆಯೆಂದ ತಿಳಿಯಬೇಕಾಗಿಲ್ಲ. ವಿಷಯ ಮತ್ತು ವಸ್ತುನಿಷ್ಠ.ರಚನೆಯ ಪ್ರಶ್ನೆಯೂ ಅಷ್ಟೆ. ಒಂದು ರಚನೆಯ ಹಿಂ ಬಯಕೆಯು ಇದೆಯೆಂದಾದರೆ ಮನುಷ್ಯನ ಬಯಕೆಯನ್ನು ನಿಜವಾಗಿಯೂ ಸೂಚಿಸುತ್ತದೆಯೇ ಎಂದು ಕೇಳಬೇಕಾಗುತ್ತದೆ.

ಡೆರಿಡಾನ ಈ ವಾದದ ಪ್ರಕಾರ ರಚನೆಯಲ್ಲಿಯೇ ಎಲ್ಲವೂ ಇಲ್ಲ. ರಚನೆಯ ಆಚೆಗ ಸತ್ಯವಿದೆ. ರಚನೆಯ ಪೂರ್ಣ ಪ್ರಮಾಣದಲ್ಲಿ ಮನುಷ್ಯನ ಮನಸ್ಸನ್ನು ಸೂಚಿಸುತ್ತದೆಯೆಂದು ಕೂಡ ತಿಳಿಯಬೇಕಾಗಿಲ್ಲ. ರಚನೆಯಲ್ಲಿ ವಸ್ತುವನ್ನು ತುಂಬಿಸುವ ಮನುಷ್ಯನ ಮನಸ್ಸಿನ ನಿಜವಾದ ಬಯ ಅದುವಾಗಿತ್ತೆ? ಅಥವಾ ಅದನ್ನು ಗ್ರಹಿಸುವ ಮನುಷ್ಯನ ಮನಸ್ಸಿನ ನಿಜವಾದ ಸ್ಥಿತಿಯೇನು? ಸತ್ಯ ಎಲ್ಲಿ ಅಡಗಿದೆ? ರಾಚನಿಕ ವಿಧಾನವು ಒಂದು ಭಾಷಿಕ ಸಂಜ್ಞೆಯಲ್ಲಿ ಉಂಟಾಗುವ ಏರಿಳಿತ ಅದರ ಒಳಗಡೆಗೆ ಜರುಗತ್ತದೆಯೆಂದು ಪರಿಭಾವಿಸುತ್ತದೆ. ರಾಚನಿಕ ವಿಧಾನದಲ್ಲಿ, ಭಾಷಿಕ ಸ್ವಭಾವದ ಉಂಟಾಗುವ ಏರಿಳಿತವಿದು.

ಬರಣಿಗೆಯೆಂಬುದನ್ನು ನೋಡಿ: ಬರವಣಿಗೆಯ ಸ್ವರೂಪದಲ್ಲಿ (ಸರಳ ಅರ್ಥದಲ್ಲಿ ಒಂದು ಕೇಂದ್ರವಿದೆ. ನಾವು ಒಂದು ಪುಸ್ತಕದ ಬಗ್ಗೆ ಮಾತನಾಡಿದರೆ ಅಥವಾ ಆ ಪುಸ್ತಕದ ಬ ಬರೆಯುವುದೆಂದರೆ. ಅಲ್ಲಿ ಲೇಖಕ ಗೈರುಹಾಜರಿ ಆಗುತ್ತಾನೆ. ಅಷ್ಟೇ ಅಲ್ಲ; ಪುಸ್ತಕದ ವಿಷ

ಮಾತ್ರ ಮುಖ್ಯವಾಗುತ್ತದೆ. ಅಲ್ಲಿ ವಿಷಯದ ಅನ್ವಯ ಮಾತ್ರವೇ ಇರುತ್ತದೆ. 'ಬರವಣಿಗೆ'ಯು ಈ ಸಂದರ್ಭದಲ್ಲಿ ಅದರಲ್ಲಿಯೇ ಇರುತ್ತದೆ. ನಾವು ಗುರುತಿಸುವ ಬರವಣಿಗೆಯೆನ್ನುವುದು ಬರವಣಿಗೆಯ ಮಾಧ್ಯಮದ ಒತ್ತಡಕ್ಕೆ ಗುರಿಯಾಗಿರುತ್ತದೆ. ಇದರ ಪರಿಣಾಮವಾಗಿ ಅದನ್ನು ಸಾಮಾನ್ಯವಾದ ಹಾಗೂ ಸಾರ್ವತ್ರಿಕವಾದ ಮೌಲ್ಯವೆಂದು ಪರಿಗಣಿಸುತ್ತೇವೆ. ಇದು ಪಲಾಯನವಾದದ ಸ್ವರೂಪವೆ?

ಹೀಗಿದ್ದರೂ ಬರವಣಿಗೆಯ ಆಯ್ಕೆಯು ಒಂದು ರೀತಿಯಿಂದ ತಾರ್ಕಿಕವಾದುದಾಗಿರುತ್ತದೆ. ಧ್ವನಿಯ ಸಾಧ್ಯತೆಯನ್ನು ನಿರಾಕರಿಸುತ್ತದೆ. ಆ ಸಂದರ್ಭದಲ್ಲಿ ಹೇಳುವವನು ಮತ್ತು ಕೇಳುವವನು ಗೈರು ಹಾಜರಿಯಾಗಿರುತ್ತಾನೆ. ಈ ಅರ್ಥದಲ್ಲಿ ಬರವಣಿಗೆಯೇ ಮುಖ್ಯ ಆಗಿಬಿಡುತ್ತದೆ. ಮಾತ್ರವಲ್ಲ ಬರೆವಣಿಗೆಗೆ ಇಳಿದಾಗ ಒತ್ತಡಕ್ಕೆ ಗುರಿಯಾಗುತ್ತದೆ. ರಾಚನಿಕವಾಗಿ 'ಬರವಣಿಗೆ' ಮತ್ತು 'ಮಾತು' ವ್ಯತ್ಯಾಸವಿಲ್ಲದದ್ದರೆ ಬರವಣಿಗೆಯ ಆಯ್ಕೆಯೆನ್ನುವುದು ಅನುಮಾನವನ್ನು ಸೃಷ್ಟಿಸುತ್ತದೆ.

ಇದರ ಜೊತೆಗೆ 'ನಿರಚನ ಸಿದ್ಧಾಂತ'ದ ಪ್ರಮುಖ ಆಸಕ್ತಿಯೆಂದರೆ ಈಗಾಗಲೇ ಸಾಹಿತ್ಯ ವಿಮರ್ಶೆಯನ್ನು ಒಂದು ಸಮಸ್ಯಾತ್ಮಕ ಕೇಂದ್ರವಾಗಿ ರೂಪಿಸಲಾಗಿದೆಯಷ್ಟೆ? ಹಾಗೆಯೇ 'ಸಾಹಿತ್ಯ'ವನ್ನು ತತ್ವಜ್ಞಾನವನ್ನು ಪ್ರತ್ಯೇಕವೆಂಬಂತೆ ಕಾಣಲಾಗಿದೆ. ತತ್ತ್ವಜ್ಞಾನವನ್ನು ಸಾಹಿತ್ಯವಾಗಿ 'ಓದಬಹುದು ಅಥವಾ ಸಾಹಿತ್ಯವನ್ನು ತತ್ವಜ್ಞಾನವಾಗಿಯೂ' ಓದಬಹುದು.

ಬಾರ್ತಸ್‌ನ ಪ್ರಕಾರ, ರಚನಾವಾದದ ಕ್ರಿಯೆಯೆಂದರೆ ಪ್ರಾರಂಭ ಮತ್ತು ಅಂತ್ಯದ ನಡುವೆ ಓದುವ ಒಂದು ಅಭ್ಯಾಸಕ್ರಮ ಮಾತ್ರ. ಅದು ಕೇವಲ ಅಧ್ಯಯನದ ಕ್ರಮವೆಂದು ಪರಿಭಾವಿಸಬೇಕಾಗಿಲ್ಲ. ರಚನಾವಾದವು ಅದರದೇ ಆದ ಕಾರಣವನ್ನು ಇಟ್ಟುಕೊಂಡಿದೆ. ಆದರೆ 'ನಿರಚನ ಸಿದ್ಧಾಂತ'ವು ಪಠ್ಯವನ್ನು ನಿರ್ದಿಷ್ಟಗೊಳಿಸಿಕೊಂಡು ಓದುವುದಿಲ್ಲ. ಹಾಗೆಂದು ಇದು ಅರ್ಥದ ವಿಜ್ಞಾನವನ್ನು (Scienes or meaning) ನಿರಾಕರಿಸುವುದಿಲ್ಲ. ರಚನಾವಾದಿಗಳು ಹೇಳುವ 'ಪೂರ್ಣತೆ'ಯ ಕಲ್ಪನೆಯನ್ನು ನಿರಾಕರಿಸುವುದರ ಮೂಲಕ ನಿರಚನವು ಹೊಸದೊಂದನ್ನು ಪಡೆಯಲು ಯತ್ನಿಸುತ್ತದೆ. ಬಾರ್ತಸ್‌ನ ಪ್ರಕಾರ ನಿರಚನವು ರಚನ ವಾದಿಗಳು ಹೇಳಿದ ವಿಚಾರವನ್ನು ಅಸ್ಥಿರಗೊಳಿಸುತ್ತದೆ. ಅದು ಒಂದು ರೀತಿಯಲ್ಲಿ ಸಾಮಾನ್ಯ ಜ್ಞಾನದ ಕೊರತೆಯಿಂದ ಬಳಲುತ್ತದೆ.

ಇನ್ನು ನವ್ಯ ವಿಮರ್ಶೆಯಲ್ಲಿ ಬಳಸಲಾಗಿರುವ 'ವ್ಯಂಗ್ಯ' 'ವಿರೋಧಾಭಾಸ'ದ ಪ್ರಶ್ನೆ. ಭಾಷೆಯು ಅಲೌಕಿಕತೆಯನ್ನು ಸೂಚಿಸುತ್ತದೆಯೆಂದು ನಿರಚನಾವಾದಿಗಳು ಹೇಳುತ್ತಾರೆ. ನವ್ಯದಲ್ಲಿ ವ್ಯಂಗ್ಯಕ್ಕೆ ವಿಶೇಷ ಅರ್ಥವನ್ನು ಕೂಡಲಾಯಿತು. 'ಬದುಕಿನ ಸಂಕೀರ್ಣತೆ ಅಥವಾ ಮೌಲ್ಯಗಳ ಸಾಪೇಕ್ಷತೆಯ ಬಗ್ಗೆ ಅರಿವನ್ನು ವ್ಯಕ್ತಪಡಿಸಲು-ನೇರವಾದ ಹೇಳಿಕೆಗಿಂತ ವಿಶಾಲವೂ ಶ್ರೀಮಂತವೂ ಆದ ಅರ್ಥವನ್ನು ಅಭಿವ್ಯಕ್ತಿಸಲು- ಸರಳೀಕರಣ ಮತ್ತು ಮೌಢ್ಯದ ಅಪಾಯವನ್ನು ತಪ್ಪಿಸಿಕೊಳ್ಳಲು, ಅಥವಾ ಇನ್ನು ಯಾವುದೇ ಕಾರಣ ಸಾಹಿತ್ಯ ಕೃತಿಯು ಪರಸ್ಪರ ಅರ್ಥಗಳನ್ನು ವಿಭಿನ್ನ ದೃಷ್ಟಿಕೋನಗಳನ್ನು ವ್ಯಾಖ್ಯಾನ ರಹಿತವಾಗಿ ಮಂಡಿಸುವುದು. ನವ್ಯ ವಿಮರ್ಶೆ ಇಂಥ ಕೃತಿಗಳನ್ನು 'ವ್ಯಂಗ್ಯ'ವೆಂದು ಗುರುತಿಸುತ್ತದೆ'.( ಓ. ಎಲ್. ನಾಗಭೂಷಣ ಸ್ವಾಮಿ 1983 ಪು. 103 )

ಇದನ್ನು ನಿರಾಕರಿಸುವಾಗ ಕೃತಿಯೊಂದರಲ್ಲಿ ರೂಪುಗೊಳ್ಳುವ ಅರ್ಥದ ಸಂಕೀರ್ಣತೆಯೆಂಬ ನವ್ಯ ವಿಮರ್ಶೆಯ ನಿಲುವನ್ನು ನಿರಚನ ಪ್ರಶ್ನಿಸುತ್ತದೆ ನವ್ಯ ವಿಮರ್ಶೆಯ ನಿಲುವು ಭಾಷೆಯ ಪ್ರಕ್ರಿಯೆಯನ್ನೇ ಅಲೌಕಿಕಗೊಳಿಸುತ್ತದೆ. ಬಾರ್ತಸ್ ನವ್ಯ ವಿಮರ್ಶಕರು ಬುದ್ಧಿವಂತಿಕೆಯ ಬಗ್ಗೆ ಕಲ್ಪನಾ ಚಾತುರ್ಯದ ಬಗ್ಗೆ ಮಾತಾಡಿದರಷ್ಟೆ? ನವ್ಯವಿಮರ್ಶೆಯು ಮಾತಾಡಿದ 'ವಿಟ್' ವಾಸ್ತವವಾಗಿ ಕ್ರಿಶ್ಚಿಯನ್ ನಂಬಿಕೆಯನ್ನು

ಸೂಚಿಸುತ್ತದೆ. ಪಠ್ಯದ ಒಳ ನೆಯ್ಗೆಯ ಬಗ್ಗೆ ಮಾತಾಡುವ ನವ್ಯವಿಮರ್ಶೆಯು ಕ್ರಿಶ್ಚಿಯನ್ ತಾತ್ವಿಕತೆಯಲ್ಲಿ ಬರುವ 'ಹೃದಯ'ದ ಪರಿಕಲ್ಪನೆಯನ್ನು ಸೂಚಿಸುತ್ತದೆ ಎಂದು ಹೇಳುತ್ತಾರೆ.

ಹೀಗಿದ್ದರೂ ನಿರಚನವಾದದ ಪ್ರಕಾರ ಕವಿತೆಯ ಪ್ರಶ್ನೆ ಸ್ವಾಯತ್ತತೆಯ ಪ್ರಶ್ನೆಯಲ್ಲ. ಅದು ಮನುಷ್ಯ ಸಂಬಂಧದ ಬಗೆಗಿನ ನಂಬಿಕೆಯೂ ಹೌದು. ಮನುಷ್ಯನ ಕಾರಣಗಳನ್ನು ಕವಿತೆಯ ಸ್ವಾಯತ್ತತೆಯು ಪ್ರತಿಪಾದಿಸುತ್ತದೆ.

ನವ್ಯವಿಮರ್ಶೆಯಲ್ಲಿ ಬಂದ ವ್ಯಂಗ್ಯ ಮತ್ತು ವಿರೋಧಾಭಾಸ ದ ಪ್ರಶ್ನೆಯು ಭಾಷೆಯ ಆಧ್ಯಾತ್ಮಿಕತೆಯನ್ನು ವಿವರಿಸುವುದರೊಂದಿಗೆ ಅದರಲ್ಲಿ ಕಾವ್ಯ ಮೀಮಾಂಸೆ ಮತ್ತು 'ಸತ್ಯ'ದ ಬಗೆಗಿನ ಧಾರ್ಮಿಕ ನಿಲುವು ಜೊತೆ ಜೊತೆಗೆ ವ್ಯಕ್ತವಾಗಿದೆ. ಹೀಗಾಗಿ ನವ್ಯವಿಮರ್ಶೆಯು ತಳೆಯುವ ನಿಲುವು ಕಲ್ಪನೆ ಮತ್ತು ತತ್ತ್ವಜ್ಞಾನದ ನಡುವಣ ಒಂದು ರೇಖೆಯಾಗಿರುತ್ತದೆ.

ನವ್ಯ ವಿಮರ್ಶೆ ಮತ್ತು ರಚನಾ ವಾದವು ಎತ್ತುವ ಪ್ರಶ್ನೆಗಳು ಒಂದು ರೀತಿಯ ಅಸಾಂಗತ್ಯದ; ಬೌದ್ಧಿಕವಾಗಿ ಉಂಟಾದ ಅತೃಪ್ತಿಯ ಪ್ರತೀಕದಂತೆ ಕಾಣಿಸುತ್ತವೆ.

ನವ್ಯವಿಮರ್ಶೆಯಲ್ಲಿ ಬಂದ ಮತ್ತೊಂದು ಪರಿಭಾಷೆ ಅನ್ವಯದ ಬಗೆಗಿನದು. ಈ ಅನ್ವಯದ ಪ್ರಶ್ನೆಯನ್ನು ನೋಡಿ: ಯಾವುದಾದರೂ ಒಂದು ಕೃತಿಯನ್ನು ಬೇರೆ ಬೇರೆ ಶಿಸ್ತುಗಳ ಮುಖಾಂತರ ನೋಡಬಹುದು ಎಂಬುದನ್ನು ನವ್ಯ ವಿಮರ್ಶೆಯು ಹೇಳಿಕೊಡುತ್ತದೆ. ಸಾಹಿತ್ಯ ಮತ್ತು ಚರಿತ್ರೆ ಸಾಹಿತ್ಯ ಮತ್ತು ಸಮಾಜಶಾಸ್ತ್ರ ಈ ತರಹದ ಕ್ರಮಗಳು ಸಾಹಿತ್ಯ ಕೃತಿಯ ಅನನ್ಯತೆಯನ್ನೇ ಎತ್ತಿಹಿಡಿಯುತ್ತವೆ ಈಗಾಗಲೇ ಚರಿತ್ರೆಯು ಸಿದ್ಧವಾಗಿದೆ ಹಾಗೆಯೇ ಎದುರುಗಡೆ ಒಂದು ಕೃತಿಯಿದೆ. ಚರಿತ್ರೆಯನ್ನು ಸಾಹಿತ್ಯಕೃತಿಗೆ ಅನ್ವಯಿಸಿದರೆ ಆಯಿತು ಎಂಬಂಥ ಧೋರಣೆಯು ಈ ರೀತಿಯ ಬರವಣಿಗೆಗಳಲ್ಲಿ ಸಿಗುತ್ತವೆ. 'ಅನ್ವಯ' ಎನ್ನುವುದು ಹೊರಗಿನಿಂದ ತಂದು 'ಒಳಗಡೆ'ಗೆ ಅನ್ವಯಿಸುವುದು ಎಂಬುದನ್ನು ಸೂಚಿಸುತ್ತದೆ. ಈ ರೀತಿಯ ಕ್ರಮದ ಶಿಸ್ತಿನಿಂದ ಮುಖ್ಯವಾಗಿ ವಿಮರ್ಶಕನ ಸ್ವಾತಂತ್ರ್ಯವು ಹೊರಟು ಹೋಗುತ್ತದೆಯೆಂದು ನಿರಚನವಾದಿಗಳು ಹೇಳುತ್ತಾರೆ.

ಎಲಿಯಟ್ ಒಂದು ಸಂದರ್ಭದಲ್ಲಿ 'ಒಬ್ಬ ಅತ್ಯುತ್ತಮ ವಿಮರ್ಶಕ ವಿಶ್ಲೇಷಣೆಯ ಸನ್ನಿವೇಶದಲ್ಲಿ ನಿರ್ದಿಷ್ಟ ಮೂಲತತ್ತ್ವ ಹಾಗೂ ವ್ಯಾಖ್ಯೆಗಳನ್ನು ಇಟ್ಟುಕೊಂಡು ಬುದ್ಧಿವಂತಿಕೆಯಿಂದ ಕೃತಿಯೊಂದನ್ನು ಪರಿಶೀಲಿಸುತ್ತಾನೆ' ಎಂದು ಹೇಳುತ್ತಾನೆ. ಇದನ್ನು ಬಾರ್ತಸ್ ಮತ್ತು ಹಾರ್ಟಮನ್ ಇಬ್ಬರೂ ತಿರಸ್ಕರಿಸುತ್ತಾರೆ. ಎಲಿಯಟ್ಟನ ನಿಲುವು ಸಾಹಿತ್ಯ ಹಾಗೂ ತತ್ತ್ವಜ್ಞಾನವನ್ನು ಬೇರೆಯಾಗಿ ನೋಡುತ್ತದೆಯೆಂಬುದೇ ಈ ನಿರಾಕರಣೆಗೆ ಕಾರಣವಾಗಿದೆ.

ಒಟ್ಟಾರೆ ಯಾವುದೇ ಸಂಕೀರ್ಣವಾದ ಉದ್ದೇಶವನ್ನು ಇಟ್ಟುಕೊಂಡು ಭಾಷೆಯನ್ನು ಗ್ರಹಿಸುವುದುದಾಗಲೀ ಒಂದು ಮಾದರಿಯನ್ನು ಸೂಚಿಸುವುದಾಗಲೀ ಸರಿಯಲ್ಲವೆಂದು ನಿರಚನ ಸಿದ್ಧಾಂತವು ಹೇಳುತ್ತದೆ. ರಚನವಾದವು ಕಟ್ಟುನಿಟ್ಟಿನ ಪರಿಭಾಷೆಯನ್ನು, 'ದ್ವಂದ್ವ'ದ ಪರಿಭಾಷೆಯನ್ನು ಒಳಗೊಂಡಿದ್ದರೆ, ನವ್ಯ ವಿಮರ್ಶೆಯಲ್ಲಿ ಆಂತರಿಕ ಸಂಕಟವಿದೆ, ಸ್ವಂತ ಅನುಮಾನಗಳಿವೆ.

## ಅಧ್ಯಾಯ - 4

# ನಿರಚನ ಸಿದ್ಧಾಂತದ ಜೊತೆಗೆ ತತ್ತ್ವಜ್ಞಾನಗಳು

ಯಾವುದೇ ಸಾಹಿತ್ಯ ಸಿದ್ಧಾಂತಗಳು ರೂಪುಗೊಳ್ಳುವಾಗ ಅದರೊಂದಿಗೆ ತತ್ತ್ವಜ್ಞಾನದ ಪರಿಗ್ರಹಿಕೆಗಳೂ ಇರುತ್ತವೆ. ಅಂದರೆ ಸಾಹಿತ್ಯ ಸಿದ್ಧಾಂತಗಳು ಹರಳುಗಟ್ಟುವುದು ತತ್ತ್ವಜ್ಞಾನದ ಜೊತೆಗಿನ ಅವಿನಾಭಾವ ಸಂಬಂಧದ ನಿರ್ವಚನದಲ್ಲಿ. ತತ್ತ್ವಜ್ಞಾನದ ಜೊತೆ ಸಾಹಿತ್ಯ ಸಿದ್ಧಾಂತಗಳು ಹೊಕ್ಕುಳ ಬಳ್ಳಿಯ ಸಂಬಂಧವನ್ನು ಇರಿಸಿಕೊಂಡಿರುತ್ತವೆ. ಈ ಅರ್ಥದಲ್ಲಿ 'ಸಾಹಿತ್ಯ ಸಿದ್ಧಾಂತ' ಎನ್ನುವುದು ಪ್ರತ್ಯೇಕಿತವಾದ, ಎಲ್ಲೋ ಒಂದು ಮೂಲೆಯಲ್ಲಿ ನಿಂತಿರಬಹುದಾದ ಹಾಗೂ ಪ್ರತ್ಯೇಕ ಅನನ್ಯತೆಯನ್ನು ಸ್ಥಾಪಿಸಿಕೊಂಡಿರಬಹುದಾದ ಸ್ವತಂತ್ರ ವಿಚಾರಧಾರೆಯಲ್ಲ. ಉದಾಹರಣೆಗೆ ರಚನಾವಾದವು ನಿರ್ದಿಷ್ಟ ಕೇಂದ್ರವೆಂಬ ಪರಿಭಾಷೆಯನ್ನು ಒಳಗೊಂಡಿದೆಯಷ್ಟೆ? ಇದು 'ಆಂತರಿಕನಿಯಮ' ಎಂಬ ತತ್ತ್ವಜ್ಞಾನದ ಗ್ರಹಿಕೆಯನ್ನು ವಿಸ್ತರಿಸುತ್ತದೆ. ಆದರೆ ನಿರಚನ ಸಿದ್ಧಾಂತವು ಪರಿಗ್ರಹಿಕೆಗಳನ್ನು ಒಂದು ಪರಿಕರವಾಗಿ ಇಟ್ಟುಕೊಂಡು ತನ್ನ ಅನನ್ಯತೆಯನ್ನು ತನ್ನದೇ ಹಾದಿಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸುತ್ತದೆ. ಹೀಗಾಗಿ ತತ್ತ್ವಜ್ಞಾನದ ನೆಲೆಗಳನ್ನು 'ಈ ರೀತಿಯಲ್ಲಿಯೇ' ಬಳಸಿಕೊಳ್ಳಲಾಗಿದೆ ಎಂದು ನಿರ್ದೇಶನಾತ್ಮಕವಾಗಿ ಹೇಳುವುದು ಕಷ್ಟ.

ನಿರಚನ ಸಿದ್ಧಾಂತಕ್ಕೆ ಪ್ರಭಾವ ಬೀರಿರುವ ವ್ಯಕ್ತಿಯೆಂದರೆ ನೀಶೆ. (1844 -1900.) ನೀಶೆಯು 'ಪಶ್ಚಿಮದ ತತ್ತ್ವಜ್ಞಾನವು ಪೂರ್ವ ನಿಯೋಜನೆಗೆ ಒಳಪಟ್ಟಿದೆ' ಎಂದು ಹೇಳುತ್ತಾನೆ. ಇಲ್ಲಿ ಪ್ರಭಾವ ಎನ್ನುವ ಪದವನ್ನು ಬಳಸಲಾಗಿದೆ. ಅದು ಒಂದು ರೀತಿಯಿಂದ ನಮ್ಮನ್ನು 'ತಪ್ಪು' ಹಾದಿಗೆ ಕರೆದೊಯ್ಯುತ್ತದೆ. ಅದರ ಜೊತೆಗೆ ಈ ಪದವು ನಿರ್ದಿಷ್ಟ ಪರಿಕಲ್ಪನಾತ್ಮಕ ಅಂಶಗಳನ್ನು ಒಳಗೊಂಡಿದ್ದು ಅದರಲ್ಲಿ ನಿರ್ದಿಷ್ಟ 'ಆಶಯ'( theme) ವನ್ನು ಪ್ರತಿಪಾದಿಸಲಾಗುತ್ತದೆ. ಇದರ ಪರಿಣಾಮವಾಗಿ ಒಂದರ ಪ್ರಭಾವದಿಂದ ಇನ್ನೊಂದು ಎನ್ನುವಾಗ ಯಾವುದು ಪ್ರಭಾವ ಬೀರಿದೆಯೋ ಅದು ಯಜಮಾನಿಕೆಯನ್ನು ವಹಿಸುತ್ತದೆ. ಹೀಗಾಗಿ ನಿರಚನ ಸಿದ್ಧಾಂತದ ಮೇಲೆ ನೀಶೆಯ ತತ್ತ್ವಜ್ಞಾನದ ಗ್ರಹಿಕೆಗಳು ಪ್ರಭಾವ ಬೀರಿದೆಯೆಂದು ಹೇಳಿರುವಾಗ ಆತನ ತತ್ತ್ವಜ್ಞಾನವೇ ಯಜಮಾನಿಕೆಯನ್ನು ವಹಿಸಿ ನಿರಚನ ಸಿದ್ಧಾಂತವು ಅದರ ಹಿಂದೆ **ಬರುವ ಅಡಿಯಾಳು ಆಗುವ ಅಪಾಯವಿರುತ್ತದೆ. ನಿರಚನ ಸಿದ್ಧಾಂತವು ವಿರೋಧಿಸುವುದು ಇದನ್ನೇ 'ಯಾವುದೇ ಆಗಲಿ' ಒಂದರ ಮೇಲೆ 'ಇನ್ನೊಂದು' ಯಜಮಾನಿಕೆಯನ್ನು ವಹಿಸುತ್ತದೆಯೆಂಬ ಪರಿಕಲ್ಪನೆಯಾಗಲಿ ಒಂದರ ಮುಖಾಂತರ ಇನ್ನೊಂದು ವಿಷಯವನ್ನು ಗ್ರಹಿಸುತ್ತೇವೆ ಎಂಬ ನಿಲುವನ್ನಾಗಲೀ ನಿರಚನ ಸಿದ್ಧಾಂತವು ನಿರಾಕರಿಸುತ್ತದೆ,** ಯಜಮಾನಿಕೆಯನ್ನು ವಹಿಸುವ ಈ ರೀತಿಯ ತಿಳುವಳಿಕೆಯನ್ನು ನಿರಚನವು ವಿರೋಧಿಸುವುದರಿಂದ ಆ ಸಿದ್ಧಾಂತಕ್ಕೆ ನೀಶೆಯೇ ಪ್ರಭಾವ ಬೀರಿದ ಎಂದು ಹೇಳಿದರೆ ಅಲ್ಲಿ 'ನೀಶೆಯ ಸಿದ್ಧಾಂತಗಳ ಯಜಮಾನಿಕೆ'ಯನ್ನು ನಿರಚನ ಸಿದ್ಧಾಂತದ ಮಟ್ಟಿಗೆ ಒಪ್ಪಿಕೊಂಡಂತಾಯಿತು. ಆದುದರಿಂದ ಇದನ್ನು ಒಂದು ಅಪಾಯವೆಂದು ಕರೆಯಬಹುದೇ?.

ಬರವಣಿಗೆಯನ್ನು ಮುಕ್ತ ಪ್ರಪಂಚಕ್ಕೆ ತೆರೆದಿರುವ ಹಾದಿಯೆಂದು ನಾವು ಪರಿಗಣಿಸಿದರೆ ಅದಕ್ಕೆ ನಿರ್ದಿಷ್ಟವಾದ ಬಂಧನವೆನ್ನುವುದು ಇರಲು ಸಾಧ್ಯವಿಲ್ಲ. ಇದರ ಹಿನ್ನೆಲೆಯಲ್ಲಿ 'ಆಲೋಚನೆಗಳ'

ಚರಿತ್ರೆಯು ನಿರ್ದಿಷ್ಟವೆಂದೂ ಪರಿಗಣಿಸುವಂತಿಲ್ಲ ಎಂದು ಡೆರಿಡಾ ಹೇಳುತ್ತಾನೆ. ಒಂದು ಪಠ್ಯವು ನಿರಚನಕ್ಕೆ ತೆರೆದುಕೊಳ್ಳುವಾಗಲೇ ಈ ಪ್ರಕ್ರಿಯೆಯು ಶುರುವಾಗುತ್ತದೆ. ನಿರಚನ ಸಂದರ್ಭದಲ್ಲಿ ಬರಹಗಾರನ ಉದ್ದೇಶವೇನು ಎಂಬುದು ಮುಖ್ಯವಲ್ಲ. ಈ ಅರ್ಥದಲ್ಲಿ ಡೆರಿಡಾ ಸುಮ್ಮನೇ ಯಥಾವತ್ತಾಗಿ ನೀಶೆಯ ತತ್ತ್ವಜ್ಞಾನವನ್ನು ಹಾಗೆಯೇ ಎತ್ತಿಕೊಂಡಿದ್ದಾನೆ ಎಂದು ಪರಿಭಾವಿಸುವಂತಿಲ್ಲ. ಅದರ ಬದಲಿಗೆ ಆತನ ತತ್ತ್ವಜ್ಞಾನವನ್ನು ಡೆರಿಡಾ ಆಧುನಿಕ, ರಚನೋತ್ತರ ಸಂದರ್ಭಕ್ಕೆ ತಕ್ಕಂತೆ ಅಳವಡಿಸಿಕೊಂಡ ಎಂದು ಹೇಳುವುದು ಸೂಕ್ತ.

ನೀಶೆಯ ಪ್ರಕಾರ, ತತ್ತ್ವಜ್ಞಾನದ ಬರವಣಿಗೆಯ ಶೈಲಿಯು ಸತ್ಯದ ಶೋಧನೆಯೆಂದು ಹೇಳುತ್ತದೆ. ಆದರೆ ಹಳೆಯ ಪರಿಕಲ್ಪನಾತ್ಮಕ ಪರಿಭಾಷೆಯ ತೊಡಕುಗಳನ್ನು ಅದು ಎದುರಿಸುತ್ತದೆ. ಆಲೋಚನೆಯ ಅಪಾರ ಸಾಧ್ಯತೆಗಳನ್ನು ಈ ರೀತಿಯ ಮಿತಿಯಿಂದ ಬಿಡುಗಡೆಗೊಳಿಸಬೇಕಾಗುತ್ತದೆ.

ತತ್ತ್ವ ಜ್ಞಾನಿಗಳು ತಮ್ಮ ತತ್ತ್ವಜ್ಞಾನದ ಬರವಣಿಗೆಯ ಸಂದರ್ಭದಲ್ಲಿ 'ರೂಪಕ'ಗಳನ್ನು ರೂಪಿಸುತ್ತಾ ಸತ್ಯವನ್ನು ಹುಡುಕುತ್ತಾರೆ ತಾನೆ? ಅಥವಾ ಸಂವಹನಕ್ಕಾಗಿ ಶಬ್ದಚಿತ್ರಗಳನ್ನು ಬಳಸುತ್ತಾರೆ. ಈ ರೀತಿಯ ಸಂದರ್ಭದಲ್ಲಿ ಬಳಕೆಯಾಗುವ ಭಾಷೆಯಲ್ಲಿ 'ರೂಪಕ'ದ ಅರ್ಥವಂತಿಕೆಯಿರುತ್ತದೆ. ಈ ರೂಪಕಗಳು ಕೂಡಾ ಅಷ್ಟೇ, ಅವು ಮೂಲವಸ್ತು ಮತ್ತು ಹೋಲಿಕೆಗೆ ಒಳಗಾದ ವಸ್ತುವಿನ ಜೊತೆಗೆ ಸಂಬಂಧವಿರಿಸಿಕೊಂಡಿರುತ್ತವೆ. ಹಾಗೆಯೇ ಭಿನ್ನತೆಯನ್ನು ಸ್ಥಾಪಿಸುತ್ತದೆ. ಹೀಗಾಗಿ ಸತ್ಯದ ಅಚೆಗೆ ಬೆಳೆಯುವ ಸಂಭಾವ್ಯತೆಯು ಇರುತ್ತದೆ. ರೂಪಕದಲ್ಲಿ ಯಾವುದು ಸತ್ಯ? ಅಲ್ಲಮನ ವಚನವೊಂದನ್ನು ಮತ್ತು ಅದಕ್ಕೆ ಸಂಬಂಧಿಸಿದಂತೆ ಡಿ. ಆರ್. ನಾಗರಾಜರು ಕೊಟ್ಟ ವ್ಯಾಖ್ಯಾನವನ್ನು ಉದಾಹರಣೆಗಾಗಿ ನೋಡಬಹುದು:

ನಾನು ಭಕ್ತನಾದೊಡೆ ನೀನು ದೈವವಾದಡೆ, ನೋಡುವೆವೆ
ಇಬ್ಬರ ಸಮರಸವನೊಂದು ಮಾಡಿ:
ಭೂಮಿಯಾಕಾಶವನೊಂದು ಮಾಡಿ:
ಚಂದ್ರ ಸೂರ್ಯರಿಬ್ಬರ ತಾಳವ ಮಾಡಿ ಆಡುವೆವೆ
ಜಡೆಯ ಮೇಲಣ ಗಂಗೆ ನೀನು ಕೇಳಾ,
ತೊಡೆಯ ಮೇಲಣ ಗೌರಿ ನೀನು ಕೇಳಾ,
ಗುಹೇಶ್ವರನೆಂಬ ಲಿಂಗವು ಎನ್ನ ಕೈಯಲ್ಲಿಸತ್ತಡೆ
ರಂಡೆಗೂಳ ನುಂಬುದು ನಿಮಗೆಲೇಸೆ?

ಈ ಇಡೀ ವಚನಕ್ಕೆ ಬೇರೆಯೇ ಆದ ಅಲೌಕಿಕ ಎನ್ನಬಹುದಾದ ಉದ್ವಿಗ್ನತೆಯಿದೆ. (ಪ್ರಭು ತತ್ತ್ವಗಳು ಮುಖಾಮುಖಿಯಾದಾಗ ಉದ್ವಿಗ್ನನಾಗುತ್ತಾನೆ.) ಈ ವಚನದಲ್ಲಿ ಎರಡು ರೀತಿಯ ಪ್ರತಿಮಾಸ್ತರಗಳ ಮುಖಾಮುಖಿಯಾಗುತ್ತದೆ. ಸಾಮಾನ್ಯ ಜಗತ್ತಿನ ಪ್ರತಿಮೆಗಳು ಕೂಡಾ ಒಂದು ಅಸಾಮಾನ್ಯ ಅನುಭವದ ಶೋಧನೆಗೆ ಬಳಕೆಯಾದಾಗ ತಮ್ಮ ಚಹರೆ, ಬಿಸಿಯಮಟ್ಟ, ಲಯಗಳನ್ನು ಬದಲಾಯಿಸಿಕೊಳ್ಳುತ್ತವೆ. ಈ ಪಠ್ಯದಲ್ಲಿ ಬರುವ ಚಂದ್ರ ಸಾಮಾನ್ಯ ಚಂದ್ರನಲ್ಲ. ಸೂರ್ಯ ಸಾಮಾನ್ಯ ಸೂರ್ಯನಲ್ಲ. ಅಂದರೆ ಇಲ್ಲಿ ಮುಖಾಮುಖಿಯಾಗುವ ನೈಸರ್ಗಿಕ ಸ್ತರ, ಪೌರಾಣಿಕಸ್ತರಗಳಲ್ಲಿ ಮೊದಲನೆಯದರ ವರ್ತನೆ ಭಿನ್ನವಾಗಿದೆ ಎಂಬುದು ಎರಡನೆಯದರ ಅಸಾಧಾರಣ ಭಯದ ಮೂಲ ನೋಡಿದಾಗ ತಿಳಿಯುತ್ತದೆ. (ಡಿ. ಆರ್. ನಾಗರಾಜ್ 1999) ಅಲ್ಲಮನ ವಚನದಲ್ಲಿ ರೂಪುಗೊಂಡಿರುವ 'ರೂಪಕ' ಮತ್ತು 'ಪ್ರತಿಮೆ'ಗಳ ಮುಖಾಮುಖಿಯನ್ನು ನಾಗರಾಜರು ವಿವರಿಸಿದ್ದಾರೆ. ಅಲ್ಲಮನ ಈ

ವಚನದಲ್ಲಿ ಬಳಕೆಯಾಗಿರುವ ರೂಪಕಗಳು ಸತ್ಯದ ಹುಡುಕಾಟವೇ ಹೊರತು ಅನ್ಯಥಾ ಬೇರೆಯಲ್ಲ. ಈ ವಚನದಲ್ಲಿ ಬಳಕೆಯಾಗಿರುವ ರೂಪಕ ಮೂಲ ವಸ್ತುವಿನ ಜೊತೆಗೆ ಸಂಬಂಧವಿರಿಸಿಕೊಂಡಿದೆ. ಹಾಗೆಯೇ ಭಿನ್ನತೆಯನ್ನೂ ಸ್ಥಾಪಿಸಿಕೊಂಡಿದೆ. ಹೀಗಾಗಿಯೇ ಈ ವಚನದಲ್ಲಿಯೇ ಆಗಲೀ- ಈ ರೂಪಕ ಮತ್ತು ಪ್ರತಿಮೆಯಲ್ಲಿಯೇ ಆಗಲಿ ಸತ್ಯವಿದೆಯೆಂದು ಹೇಳಲಾಗುವುದಿಲ್ಲ.

ತತ್ತ್ವಜ್ಞಾನಿಗಳು ಮತ್ತೊಂದು ಮಾತನ್ನು ಬಳಸುತ್ತಾರೆ. ಅದು 'ಕಾರಣ'. ತತ್ತ್ವಜ್ಞಾನದ ಕಲ್ಪಿತ ವಲಯಕ್ಕಿಂತ ಆಚೆಗೆ ಉಳಿಯವುದು ಕಾರಣ. ನೀಶೆಯ ಪ್ರಕಾರ, ಸತ್ಯವೆಂದರೆ ಅನೇಕ ರೂಪಕಗಳ ಕವಾಯತು ಇದ್ದ ಹಾಗೆ. ಸತ್ಯವೆನ್ನುವುದು ಒಂದು ರೀತಿಯ ಭ್ರಮೆ. ಆದರೆ ಭ್ರಮೆಯನ್ನು ಮರೆಯುವ ಹಾಗೆ ಮಾಡಲಾಗುತ್ತದೆ. ನಾಣ್ಯದ ಮುಖವು ಪೂರ್ತಿಯಾಗಿ ಅಳಿಸಿ ಹೋಗಿದ್ದರೆ ಅದನ್ನು ನಾಣ್ಯವೆಂದು ಅಂಗೀಕರಿಸುವಂತಿಲ್ಲ. ಹಾಗೆಯೇ ಸತ್ಯವು ಕೂಡಾ.

ಈ ಮಾತನ್ನೇ ವಿಸ್ತರಿಸುವುದಾದರೆ ಸತ್ಯವೆನ್ನುವುದು ಒಂದಿದೆಯೆಂದು ನಾವು ಹೇಳುತ್ತೇವೆ. ಮತ್ತು ಅದನ್ನು ನಾವು ನಮ್ಮ ಗ್ರಹಿಕೆಗಳಿಗೆ ಅನುಸಾರವಾಗಿ ವ್ಯಾಖ್ಯಾನಿಸುತ್ತೇವೆ. ಹಾಗೆ ಗುರುತಿಸುವಾಗ ನಮ್ಮ ನಮ್ಮ ದೃಷ್ಟಿಕೋನಕ್ಕೆ ಅನುಸಾರವಾಗಿ ವ್ಯಾಖ್ಯಾನಿಸುವುದರಿಂದ ಅಂತಿಮ ಸತ್ಯವೆನ್ನುವುದು ಒಂದಾಗದೆ ಹಲವು ರೂಪಗಳು ನಮ್ಮ ಮಾತುಗಳಿಗೆ ಅನುಸಾರವಾಗಿ ಧರಿಸುತ್ತದೆ.

'ಈ ಬೆಂಗಳೂರೆಂಬ ಮಹಾನಗರಿಯಿದೆಯಲ್ಲ? ಇದು ನನ್ನ ಪಾಲಿಗೆ ಕೇವಲ ಒಂದು ಊರಲ್ಲ. 'ಕಲ್ಲು' ಸಿಮೆಂಟು, ಇಟ್ಟಿಗೆ, ಡಾಮರು, ಗಿಡ, ಮರ, ಮನುಷ್ಯರು, ರಾಜಕೀಯ ಉಹುಂ; ಬೆಂಗಳೂರೆಂದರೆ ಇದ್ಯಾವುದೂ ಅಲ್ಲ. ನನ್ನ ಪಾಲಿಗೆ ಬೆಂಗಳೂರೆಂಬುದು ನಿತ್ಯ ಸವಾಲುಗಳ ಸ್ವಪ್ನಕನ್ನಿಕೆ. ಅವಳೆಂದರೆ ನನಗಿಷ್ಟ' ಬೆಂಗಳೂರಿನ ಕುರಿತು 'ಒಮರ್ಟಾ' ಕಾದಂಬರಿಯ ಮುನ್ನುಡಿಯಲ್ಲಿ ರವಿ ಬೆಳಗೆರೆಯವರು ಹೇಳುತ್ತಾರೆ.

ಹೋಗುತ್ತಿರುತ್ತೇನೆ : ಹಾಗೇ ನೋಡುತ್ತೇನೆ
ಗಾಳಿಯೊಳಗೆ ಸಂಭೋಗಿಸುವ ವಿಜೃಂಭಿತ ಕಟ್ಟಡಗಳ
ಅವುಗಳ ನೆರಳುಗಳಡಿಯಲ್ಲಿ ಓಡುವ ಬಸ್ಸುಗಳ
ಕಾರುಗಳ ಸ್ಕೂಟರುಗಳ ಸೈಕಲುಗಳ
ಬೂಟುಗಳ ಚಪ್ಪಲಿಗಳ ಮತ್ತೆ ಬರಿಗಾಲುಗಳ

ಈ ಕವಿತೆಯೂ ಬೆಂಗಳೂರನ್ನು ಕುರಿತಂತೆ ಇದೆ. ಇದನ್ನು ಬರೆದವರು ಪಂಡಿತಾರಾಧ್ಯ. 'ಬೆಂಗಳೂರು' ಎನ್ನುವುದನ್ನು ಈ ಲೇಖಕರು ಬರೆದುದು 'ಸತ್ಯ'ವಲ್ಲ ಎಂದು ಕರೆಯು. ವಂತಿಲ್ಲ. ಮತ್ತು 'ಸತ್ಯ'ವು ಅವರವರು ಕಂಡಹಾಗೆ ರೂಪುಗೊಂಡಿದೆ. ರವಿ ಬೆಳಗೆರೆಯವರು ಬೆಂಗಳೂರನ್ನು 'ಸ್ವಪ್ನ ಕನ್ನಿಕೆ' ಯೆಂದು ಕರೆಯುತ್ತಾರೆ. ಪಂಡಿತಾರಾಧ್ಯರು ಅದನ್ನೆ 'ಕಟ್ಟಡಗಳ ರಾಶಿ' ಯೆಂದು ಕರೆಯುತ್ತಾರೆ. ಇಬ್ಬರೂ ಲೇಖಕರು ತಾವು ಕಂಡ 'ಬೆಂಗಳೂರೆಂಬ' ಸತ್ಯಕ್ಕೆ ಬೇರೆ ಬೇರೆ ರೂಪಕವನ್ನು ಕೊಡುತ್ತಿದ್ದಾರೆ. ಇಬ್ಬರೂ 'ರೂಪಕ' ಬಳಸಿಕೊಂಡಿರುವುದು ಆಲೋಚನೆಯನ್ನು ಅಭಿವ್ಯಕ್ತಿಸುವುದಕ್ಕಾಗಿ. ಇದು ಲೇಖಕರಿಗೆ ಪ್ರಮುಖವಾಗಿ ರೂಪಕವನ್ನು ಕಟ್ಟಲು ಸಹಾಯ ಮಾಡಿದೆಯಾದರೂ. 'ಈ ಸತ್ಯ'ವೂ ಮತ್ತೂ ಹೊರಗಡೆ ಉಳಿದಿರುತ್ತದೆ. ಆದುದರಿಂದಲೇ 'ಸತ್ಯವೆಂದರೆ' ಸಂವಾದಿಯಾಗಿದ್ದು ಅದು ಭ್ರಮೆಯಾಗಿಯೇ ಇರುತ್ತದೆ. 'ನಾನು ಕಂಡ ಸತ್ಯ' ಅಂತ ಮಾತಾಡುವುದೇ ಈ ದೃಷ್ಟಿಯಿಂದ ಅರ್ಥಹೀನ.

ನೀಶೆಯ ಈ ಮಾತನ್ನು ಗಮನಿಸಿದರೆ ಎಲ್ಲಾ ತತ್ತ್ವಜ್ಞಾನಗಳು ತಾವು ತರ್ಕಬದ್ಧ ಅಥವಾ ನಿರ್ದಿಷ್ಟ ಕಾರಣಕ್ಕೆ ಬದ್ಧವೆಂದು ಹೇಳಿದರೂ ಕೂಡಾ ತಮ್ಮ ಆಂತರಿಕ ಪಠ್ಯವನ್ನು ಆಕರ್ಷಕ ಮಾತುಗಳಿಗೆ ಒಡ್ಡುತ್ತಿರುತ್ತವೆ. ಈ ಆಕರ್ಷಕ ಮಾತುಗಳು ಸಾಂಜ್ಞಿಕ ಅವಯವವನ್ನು ಒಳಗೊಂಡಿದ್ದು ಒಂದು ರೀತಿಯಲ್ಲಿ 'ಸತ್ಯ'ದ ಪ್ರಭುತ್ವವನ್ನು ದಮನಗೊಳಿಸುತ್ತವೆ. ಹೀಗಾಗಿಯೇ ತತ್ತ್ವಜ್ಞಾನಿಗಳು ಮಾತಾಡುತ್ತಿರುವುದು ರೂಪಕಗಳಲ್ಲಿ. ಐ.ಎ. ರಿಚರ್ಡ್ಸ್ ಒಂದು ಸಂದರ್ಭದಲ್ಲಿ 'ಆಲೋಚನೆಯೇ ಒಂದು ರೂಪಕ'ವೆಂದು ಹೇಳಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಡೆರಿಡಾನ ಪ್ರಕಾರ, ವಿಜ್ಞಾನವೆನ್ನುವುದು 'ಕಾರಣ' ವೆನ್ನುವುದರ ತಾತ್ತ್ವಿಕತೆಯನ್ನು ಹೊಂದಿರುತ್ತದೆ. ಆದರೆ ಅಲ್ಲೊಂದು ಒತ್ತಡರೂಪದ (Repressive) ಸಂವಾದವು ಇರುತ್ತದೆ. ನೀಶೆ ಗ್ರೀಕ್ ಮೂಲದಲ್ಲಿರುವ ಸತ್ಯ ಮತ್ತು ತರ್ಕದ ಸಮಾನ ಪದಗಳ ಮೂಲಕ ಇದನ್ನು ಗುರುತಿಸುತ್ತಾನೆ. ಕಾರಣವನ್ನು ಹೊರತುಪಡಿಸಿದ ವೈಜ್ಞಾನಿಕ ಪ್ರಕ್ರಿಯೆಯೆಂಬುದಿಲ್ಲ. ಪ್ರತಿಯೊಂದು ವೈಜ್ಞಾನಿಕ ಸತ್ಯವೆಂದು ಯಾವುದನ್ನು ಗುರುತಿಸುತ್ತೇವೆಯೋ ಅಂತಿಮವಾಗಿ ಅವು ಕಾರಣವೊಂದರ ದೆಸೆಯಿಂದ ಹುಟ್ಟಿರುತ್ತವೆ. ಗೆಲಿಲಿಯೋ ಭೂಮಿಯು ಸೂರ್ಯನ ಸುತ್ತುತಿರುಗುತ್ತದೆಯೆಂದು ಹೇಳಿದ್ದು ' ವೈಜ್ಞಾನಿಕ ಸತ್ಯ'ವೆಂದು ನಾವು ಕರೆಯುತ್ತೇವೆ. ಆದರೆ ಈ ರೀತಿಯ 'ವೈಜ್ಞಾನಿಕ ಸತ್ಯ'ಗಳು ವಿನಾಕಾರಣವೇನೂ ಹುಟ್ಟಿಲ್ಲವಷ್ಟೆ? ಯಾವುದೇ ವೈಜ್ಞಾನಿಕ ಹುಡುಕಾಟಕ್ಕೆ ಕಾರಣವು ಇರುವ ಹಾಗೆಯೇ, ಆರೀತಿಯ ವೈಜ್ಞಾನಿಕ ಹುಡುಕಾಟಕ್ಕೆ ಕಾರಣವಾಗುವ ಬೇರೆ ಬೇರೆ ಒತ್ತಡಗಳು ಮನುಷ್ಯನ ಆಲೋಚನಾಕ್ರಮದ ಮೇಲೆ ಪ್ರಭಾವ ಬೀರುತ್ತವೆ. ಭೂಮಿಯು ಚಪ್ಪಟೆಯಾಗಿದೆ, ಸೂರ್ಯನು ಭೂಮಿಯಸುತ್ತತಿರುಗುತ್ತಾನೆಯೆಂಬ ನಂಬಿಕೆಯಿದ್ದ ಕಾಲದಲ್ಲಿ 'ಭೂಮಿಯು ಸೂರ್ಯನ ಸುತ್ತತಿರುಗುತ್ತದೆಯೆಂಬ ವೈಜ್ಞಾನಿಕೆ ಚಿಂತನೆಯೇ ಹುಡುಕಾಟವಾಯಿತು. ಅಂದರೆ : ವೈಜ್ಞಾನಿಕ ಚಿಂತನೆಯು ಶೂನ್ಯದಿಂದ ಅವತರಿಸುವುದಿಲ್ಲ, ಈ ದೃಷ್ಟಿಯಿಂದ ವಿಜ್ಞಾನವೂ ಕೂಡಾ 'ಕಾರಣಗಳು' ಎನ್ನುವ ತಾತ್ತ್ವಿಕ ಅಂಶಗಳ ಜೊತೆಗೆ ಸಂವಾದ ನಡೆಸುತ್ತದೆ. ಈ ರೀತಿಯ ದೃಷ್ಟಿಯು ಗ್ರೀಕ್ ಸತ್ಯ ಮತ್ತು ತರ್ಕದ ನಡುವಣ ಸಂಬಂಧವನ್ನು ಸೂಚಿಸುತ್ತವೆ. ತರ್ಕ ಅಥವಾ ಪ್ರಮೇಯವಿಲ್ಲದೆ ಸತ್ಯದ ಹುಡುಕಾಟವೇ ಅಸಾಧ್ಯ. ತರ್ಕರಾಹಿತ್ಯ ಸ್ಥಿತಿಯಿಂದ ವೈಜ್ಞಾನಿಕತೆಯಾಗಲೀ ಸತ್ಯವಾಗಲೀ ಹೊರ ಹೊಮ್ಮುವುದಿಲ್ಲ. ಹೀಗಾಗಿ 'ಕಾರಣವನ್ನು ಹೊರತುಪಡಿಸಿದ ವಿಜ್ಞಾನವನ್ನು ಡೆರಿಡಾ ನಿರಾಕರಿಸುತ್ತಾನೆ. ತತ್ತ್ವಜ್ಞಾನಗಳು ತರ್ಕಬದ್ಧ ಮತ್ತು ಕಾರಣಕ್ಕೆ ಬದ್ಧವೆಂದು ನಾವು ಕರೆದರೂ ಅದಕ್ಕೂ ಅನೇಕ ಸಂದರ್ಭದಲ್ಲಿ ಆಕರ್ಷಕ ಮಾತುಗಳ ಅಗತ್ಯವಿರುತ್ತದೆ. ಯು. ಆರ್. ಅನಂತಮೂರ್ತಿಯವರು ಹೇಳುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು: 'ಗಾಂಧಿ ಮತ್ತು ಮಾರ್ಕ್ಸ್ ಇಬ್ಬರೂ ತಮ್ಮ ತಮ್ಮ ಸಂಸ್ಕೃತಿಯ ವಿಶಿಷ್ಟ ಅನುಭವದಿಂದಲೇ ಒಂದು ಸಾರ್ವತ್ರಿಕ ಸತ್ಯ ಸ್ಥಾಪಿಸಲು ನೋಡುತ್ತಾರೆ. ಮನುಷ್ಯನ ಲೋಭ ವಿನಾಶಕಾರಿಯಾದ 'ರೋಗ' ವೆಂದು ಗಾಂಧಿಗೆ ಕಂಡರೆ, ಈ ಲೋಭವನ್ನೇ ಚರಿತ್ರೆಯ ಪ್ರಗತಿಯ ಹಿಂದಿರುವ ಶಕ್ತಿಯಾಗಿ ಮಾರ್ಕ್ಸ್ ಕಾಣುತ್ತಾನೆ. ಈ ಲೋಭ ಮತ್ತು ಇದಕ್ಕೆ ಎದುರು ಕಾರ್ಮಿಕರ ಹೋರಾಟದಲ್ಲಿ ಮಾರ್ಕ್ಸ್ ಚರಿತ್ರೆಯ ಪಲ್ಲಟಗಳನ್ನು ಕಾಣುತ್ತಾನೆ. ಮನುಷ್ಯನ ಸ್ಥಿರವಾದ ಆತ್ಮದ ದೃಷ್ಟಿಯಿಂದ ಲೋಭದ ಬೆಳವಣಿಗೆಯನ್ನೇ ಗಾಂಧಿ ತಿರಸ್ಕರಿಸುತ್ತಾರೆ. ಅದರಲ್ಲಿ ಗುಣಾತ್ಮಕವಾದದ್ದನ್ನೇನನ್ನೂ ಗಾಂಧಿ ಕಾಣುವುದಿಲ್ಲ' (ಪೂರ್ವಾಪರ 1996. ಪು 10) 'ಮಾರ್ಕ್ಸ್ ಮತ್ತು ಗಾಂಧಿ' ಎಂಬ ಪರಿಭಾಷೆಯನ್ನು ಅನಂತಮೂರ್ತಿಯವರು ಬಳಸುತ್ತಾರೆ. ಮಾರ್ಕ್ಸ್ ಮತ್ತು ಗಾಂಧಿ ಎಂದು ಕರೆಯುವಾಗಲೇ ಒಂದು ಸಮಸ್ಯೆ ಶುರುವಾಗುತ್ತದೆ. ಯಾಕೆ ಅನಂತ ಮೂರ್ತಿಯವರು ಇಬ್ಬರು ಚಿಂತಕರ ನಡುವಣ ಆಯ್ಕೆಯನ್ನು ಸೂಚಿಸುತ್ತಾರೆ ? ಈ ಆಯ್ಕೆಯೇ ಓದುಗರ ಮೇಲೆ 'ಒಂದು 'ಹೇರುವಿಕೆ' ಯಾಗಿ ಪರಿವರ್ತನೆಯಾಗುತ್ತದೆ. ಗಾಂಧಿಯ ಚಿಂತನೆಯೆಂಬ

ಪಠ್ಯದ ಮೇಲೆ 'ಅದನ್ನು ಸತ್ಯವೆಂದು ಪರಿಭಾವಿಸಿದರೆ' ಅನಂತಮೂರ್ತಿಯವರ ಬರಹವು ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸುತ್ತದೆ. ಗಾಂಧಿಗೆ ಒಂದು ನಿರ್ದಿಷ್ಟ ಕಾರಣ ಇರಬಹುದು. ಆ ಕಾರಣವನ್ನು ಗಾಂಧಿ ಮಾತುಗಳಲ್ಲಿ ಹೇಳುವಾಗಲೇ ಬೇರೊಂದು ರೀತಿಯಾಗಿರಬಹುದು. ಮತ್ತು ಅನಂತಮೂರ್ತಿಯವರು ಅದನ್ನು ಗ್ರಹಿಸುವಾಗಲೇ ಮತ್ತೊಂದು ರೀತಿಯಾಗಿರಬಹುದು. ಹೀಗೆ ಬೇರೆ ಬೇರೆ ರೀತಿಯ ಮಾತುಗಳು **ಒಂದು ಸತ್ಯದ** ಮೇಲೆ ಪ್ರಭಾವ ಬೀರುತ್ತದೆಯೆಂದು ನೀಶೆಯು ಹೇಳುತ್ತಾನೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ನೀಶೆ ಮತ್ತು ಡೆರಿಡಾ ಇಬ್ಬರೂ ಮುಕ್ತ; ಬಹುಮುಖಿ ಸಂವಾದ ಕ್ರಮಗಳನ್ನು ಎತ್ತಿಹಿಡಿದಿದ್ದಾರೆ. ಆಲೋಚನೆಯು ಉದ್ದೇಶಿಸಿದ ಅರ್ಥಕ್ಕಿಂತ ಭಿನ್ನ ಅರ್ಥಕ್ಕೆ ಮಾಡುವ ಅನ್ವಯವೇ ಮುಖ್ಯವೆಂದು ಇಬ್ಬರೂ ಪರಿಭಾವಿಸುತ್ತಾರೆ. ನೀಶೆಯ ಉದ್ದೇಶವನ್ನು ವಿವರಿಸುತ್ತಾ ಡೆರಿಡಾ ಹೇಳುವುದು ಹೀಗೆ, ಪ್ರತಿಯೊಂದು ಪದವು ಮುಗ್ಧವಾಗಿಯೇ ರೂಪುಗೊಂಡಿರುತ್ತದೆ. ಸಂಜ್ಞೆಗಳ ಜಗತ್ತಿನಲ್ಲಿ ಯಾವುದೇ ತಪ್ಪುಗಳಿರುವುದಿಲ್ಲ. ಯಾವುದೇ ನಿರ್ದಿಷ್ಟ ಸತ್ಯವೆಂಬ ಪರಿಕಲ್ಪನೆಯಾಗಲೀ ಯಾವುದೇ ನಿರ್ದಿಷ್ಟ ಉಗಮವೆಂಬ ಸಂಗತಿಯಾಗಲೀ ಇರುವುದಿಲ್ಲ. ಪ್ರತಿಯೊಂದು ಸಂಜ್ಞೆಯೂ ಕ್ರಿಯಾಶೀಲವಾದ ಅನ್ವಯವನ್ನು ಬಯಸುತ್ತದೆ ಅಷ್ಟೇ. ಹಾಗೆಯೇ ನೀಶೆಯ ರೂಪಕದ ಬಗ್ಗೆ ಎತ್ತುವ ಚರ್ಚೆಯು ಗಮನಾರ್ಹವಾದುದು: ರೂಪಕಗಳ ನಿರ್ಮಾಣವು ಮನುಷ್ಯನ ಸ್ವಭಾವಗಳಲ್ಲಿ ಒಂದು. ಅವುಗಳ ನಿರ್ಮಾಣದಲ್ಲಿ ಯಾವುದೇ ನಿರ್ದಿಷ್ಟ ಕಾರಣವೆನ್ನುವುದು ಬೇಕಾಗಿರುವುದಿಲ್ಲ. ಹೀಗಾಗಿ ರೂಪಕಗಳು ಮನುಷ್ಯನಿಂದ ದೂರವೇ ನಿಂತಿರುತ್ತವೆ. ಈ ವಾದಗಳನ್ನು ನೋಡಿದರೆ ಈ ರೂಪಕಗಳೆನ್ನುವುದು ನಿಜದ ನೇರ ಬಿಂಬವೇನಲ್ಲ. 'ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ' ಎನ್ನುವ ಮಾತನ್ನು ಗಮನಿಸಿ, ಈ ಮಾತನ್ನು ನೋಡಿದರೆ ಎರಡು ಅಸಮಾನ ಸಂಗತಿಗಳ ನಡುವೆ ಹೋಲಿಕೆಯಿರುವಂತೆ- ನಿಜವನ್ನು ಪ್ರತಿಪಾದಿಸುತ್ತದೆಯೆಂದು ಹೇಳುವಂತಿಲ್ಲ. 'ಹರಿಶ್ಚಂದ್ರಕಾವ್ಯ'ದಲ್ಲಿ ಹರಿಶ್ಚಂದ್ರನು ರಾಜ್ಯತ್ಯಾಗ ಮಾಡಿ ಹೊರಟು ಹೋಗುವ ಸನ್ನಿವೇಶವನ್ನು ಈ ಮಾತು ಸೂಚಿಸುತ್ತದೆ. ತೀರಾಸಾಮಾನ್ಯ ಮಾತಿನಲ್ಲಿ ಹೇಳಬೇಕೆಂದರೆ 'ಹರಿಶ್ಚಂದ್ರನು ಪುರವನ್ನು ಬಿಟ್ಟು ಹೋದನು' ಎಂದು ಹೇಳಬೇಕು. ಅದನ್ನು ಕಾವ್ಯದಲ್ಲಿ 'ಪುರದ ಪುಣ್ಯಂ ಪುರುಷ ರೂಪಿಂದೆ ಪೋಗುತಿದೆ' ಎಂದು ಹೇಳಲಾಗಿದೆ. ಈ ವಾಕ್ಯದಲ್ಲಿ ನಿಜವನ್ನು ಪ್ರತಿಪಾದಿಸುವುದಷ್ಟೇ ಉದ್ದೇಶವಲ್ಲ.

'ಕಾವ್ಯವೆನ್ನುವುದು ವಸ್ತು ಅಥವಾ ಘಟನೆಗಳ ಯಥಾವತ್ತಾದ ನಿರೂಪಣೆಯಲ್ಲ ಅಥವಾ ತರ್ಕ ಸಮ್ಮತವಾದ ಬೌದ್ಧಿಕ ವಿವೇಚನೆಯಲ್ಲ; ಹೃದಯದಿಂದ ದೀಪ್ತವಾದ ಸೌಂದರ್ಯಾನುಭವದ ಸುಂದರ ಉಕ್ತಿ. ಅದಕ್ಕೆ ಅನುಗುಣವಾದ ಭಾಷೆ, ಅಲ್ಲಿ ಸಾಮಾನ್ಯ ಆಡು ಮಾತಿನಿಂದ ಭಿನ್ನವಾಗಿ ಒಂದು ವಿಶಿಷ್ಟವಾದ ಬಾಗುವಿಕೆಯನ್ನು ಪಡೆಯುತ್ತದೆ. ಇದೇ ಕಾವ್ಯ ಮೀಮಾಂಸೆಯಲ್ಲಿ 'ಲಕ್ಷಣ' 'ಅಲಂಕಾರ'- ಹೆಸರುಗಳನ್ನು ಪಡೆಯಿತು' ಎಂದು ತಿಪ್ಪೇರುದ್ರಸ್ವಾಮಿಯವರು ಅಲಂಕಾರಗಳ ಬಗ್ಗೆ ಹೇಳಿರುವುದನ್ನು ನೆನಪಿಸಿಕೊಳ್ಳಬಹುದು. ( ತೌಲನಿಕ ಕಾವ್ಯ ಮೀಮಾಂಸೆ .1993 ಪು 143 ). ಈ ಮಾತು ರೂಪಕಕ್ಕಿರುವ ನಿರ್ದಿಷ್ಟ ತರ್ಕದ ಸಾಧ್ಯತೆಯನ್ನು ತಳ್ಳಿಹಾಕುತ್ತದೆ. ಡೆರಿಡಾ ಮತ್ತು ನೀಶೆ ಇಬ್ಬರೂ ಅರ್ಥದ ಬಹುತ್ವವನ್ನು ಒಪ್ಪಿಕೊಂಡವರು. ನಿರಚನ ಸಿದ್ಧಾಂತ ಕೂಡಾ ಅರ್ಥದ ಬಹುತ್ವವನ್ನೆ ಪ್ರತಿಪಾದಿಸುತ್ತದೆ. ನಿರ್ದಿಷ್ಟ ರೂಪಕವು ನಿರ್ದಿಷ್ಟ ಮನುಷ್ಯನ ನಿರ್ದಿಷ್ಟ ಸನ್ನಿವೇಶದಲ್ಲಿ ಹುಟ್ಟುತ್ತದೆ. ಹೀಗಾಗಿ ಹುಟ್ಟುವಾಗ ಅದಕ್ಕೆ ನಿರ್ದಿಷ್ಟ ಕಾರಣವಿರುತ್ತದೆಯೆಂಬ ಪ್ರಮೇಯವನ್ನು ನಿರಚನ ಸಿದ್ಧಾಂತವು ಅಲ್ಲಗಳೆಯುತ್ತದೆ. **ಅನಿರ್ದಿಷ್ಟ ಮತ್ತು ಬಹುತ್ವವೆಂಬ ಪರಿಕಲ್ಪನೆಯೇ ನಿರಚನ ಸಿದ್ಧಾಂತದ ಪ್ರಮುಖ ಆಸಕ್ತಿಯಾಗಿದೆ.**

ಮತ್ತೊಂದು ಸಂದರ್ಭದಲ್ಲಿ ನೀಶೆ ಆಲೋಚನೆಯನ್ನೂ ಕುರಿತು ಮಾತನಾಡುತ್ತಾನೆ. 'ಆಲೋಚನೆ'ಯೆನ್ನುವುದು ಸುಸಂಘಟತವಾದ ರೂಪವೆಂದು ನಾವು ಕರೆಯುವಂತಿಲ್ಲ. ಆಲೋಚನೆಯು ಆದಿಮ (Primitive) ಸ್ವರೂಪವನ್ನು ಹೊಂದಿರುವುದಲ್ಲದೆ ಅದು ನಿಯಮ ರಾಹಿತ್ಯ ಸ್ಥಿತಿಯನ್ನು ಹೊಂದಿರುತ್ತದೆ. ನಮ್ಮ ಆಲೋಚನೆಯು ಹಳೆಯ ಸಂಗತಿಗಳ ಜೊತೆ ಹೊಸ ಬಿಂಬವನ್ನು ಸಂಯೋಜಿಸುತ್ತಿರುತ್ತದೆ. ಅದರ ಮೂಲಕ ಎರಡನ್ನು (ಹೊಸತು ಮತ್ತು ಹಳೆಯದನ್ನು) ಸಮಾನವಾಗಿ ನೋಡುತ್ತದೆ. ಆಲೋಚನೆಯೆನ್ನುವುದು ಈ ಅರ್ಥದಲ್ಲಿ ನಿರ್ದಿಷ್ಟವಾದ ರೂಪವನ್ನು ಹೊಂದಿರುವುದಿಲ್ಲ. ಮತ್ತು ಅದು ಒಂದು ರೀತಿಯಲ್ಲಿ ಅನೇಕ ಒತ್ತಡಗಳಿಗೆ ಸಿಲುಕಿಕೊಂಡು ಹೊಸದನ್ನು ಮತ್ತು ಹಳೆಯದನ್ನು ಸಮಾನವಾಗಿ ನೋಡಲು ಯತ್ನಿಸುತ್ತದೆ. ನಾವು ಸತ್ಯವೆಂದು ಯಾವುದನ್ನು ಕರೆಯುತ್ತೇವೆಯೋ ಅದು ಕೂಡಾ ನಮ್ಮ ಅನ್ವಯದ ಕ್ರಮಗಳನ್ನು ಸೂಚಿಸುತ್ತಿರುತ್ತದೆ. ಕೇವಲ ಅನ್ವಯ ಕ್ರಮವಾಗಿ ಮಾತ್ರವೇ ಇರುತ್ತದೆ. ಸತ್ಯವೆನ್ನುವುದು ಹೀಗೆಯೇ ಇರುತ್ತದೆಯೆನ್ನುವುದನ್ನು ವಿರೋಧಿಸುವ ನಿರಚನ ಸಿದ್ಧಾಂತದ ಮೂಲ ತಳಹದಿಯು ಈ ರೀತಿಯಲ್ಲಿ ವ್ಯಕ್ತಗೊಂಡಿದೆ. ರಚನಾವಾದಿಗಳು ಸತ್ಯವೆನ್ನುವುದನ್ನು ರಚನೆಯ ಕೇಂದ್ರದಲ್ಲಿಯೇ ಹುಡುಕುವ ಕ್ರಮವನ್ನು ಇಲ್ಲಿ ಮತ್ತೊಮ್ಮೆ ಜ್ಞಾಪಿಸಿಕೊಳ್ಳಬಹುದು.

ಇದರೊಂದಿಗೆ ನೀಶೆಯ ಪ್ರಕಾರ, ರೂಪಕವೆನ್ನುವುದು ಎರಡು ಅಸಮಾನ ವಸ್ತುಗಳ ನಡುವೆ ಹೋಲಿಕೆಯನ್ನು ತಂದಿಡುತ್ತದೆಯೆಂಬ ವಾದವನ್ನು ಕೂಡಾ ಜ್ಞಾಪಿಸಿಕೊಳ್ಳಬೇಕು. ರೂಪಕವೆಂದರೆ ಹೀಗೆಯೇ ಅಸಮಾನ ವಸ್ತುಗಳ ನಡುವೆ ಸಾದೃಶ್ಯವನ್ನು ಕಲ್ಪಿಸುವುದು. ಆದರೆ ಈ ಸಾದೃಶ್ಯವು ಒಂದರ ಜೊತೆಗೆ ಮತ್ತೊಂದು ಬೆಸೆಯುವುದು ಮಾತ್ರವಲ್ಲ; ವಸ್ತು ಅನನ್ಯತೆಯನ್ನು ತೊಡೆದುಹಾಕುತ್ತದೆ. ಸ್ವಅನನ್ಯತೆ ತೊಡೆದಾಗ ಸಹಜವಾಗಿಯೇ ಅರ್ಥದ ಅನನ್ಯತೆಯೂ ಹೊರಟು ಹೋಗುತ್ತದೆ.

ಹಾಗೆಯೇ ಅನ್ವಯದ ಪ್ರಶ್ನೆ ಕೂಡಾ 'ಅನ್ವಯವು ಅರ್ಥವಂತಿಕೆಗೆ ಒಂದು ಪ್ರಸ್ತಾವನೆಯ ರೂಪದಂತಿರುತ್ತದೆ. ಸಂಜ್ಞೆಯನ್ನು ರೂಪಿಸಿವುದೆಂದರೆ ಸಂಜ್ಞೆಯನ್ನು ಚಿತ್ರರೂಪ(Figure)ಕ್ಕೆ ಇಳಿಸುವುದು ಎಂದರ್ಥ. ಹೀಗಾಗಿ ಈ ರೀತಿಯ ಆಲೋಚನಾ ಕ್ರಮದಲ್ಲಿ 'ಸಾಹಿತ್ಯಿಕ' 'ಸತ್ಯ' 'ಸ್ವ-ಅನನ್ಯತೆಯ ಅರ್ಥವಂತಿಕೆ' ಎಂಬುದಕ್ಕೆ ಯಾವ ಅರ್ಥವಂತಿಕೆಯೂ ಇರುವುದಿಲ್ಲ. ಸಾಹಿತ್ಯದಲ್ಲಿ ಒಂದು ಆಲೋಚನೆಯಿದೆಯೆನ್ನುವುದಕ್ಕೆ ನಿರಚನದಲ್ಲಿ ಯಾವ ಅರ್ಥವೂ ಇಲ್ಲ. ಹಾಗೆಯೇ ನಮ್ಮ ಆಲೋಚನೆಗೂ ಒಂದು ಸತ್ಯವಿದೆಯನ್ನೆವುದಕ್ಕೆ ಅರ್ಥವಿಲ್ಲ. 'ಸಾಹಿತ್ಯದಲ್ಲಿ' ಸ್ವ-ಅನನ್ಯತೆಯ ಅರ್ಥವಂತಿಕೆ ಯೆನ್ನುವುದನ್ನೂ ನಿರಚನವು ವಿರೋಧಿಸುತ್ತದೆ. (ನವ್ಯ ಸಂದರ್ಭದಲ್ಲಿ ಈ ರೀತಿಯ ಮಾತುಗಳು ಪ್ರಚಲಿತಕ್ಕೆ ಬಂದುದನ್ನು ನೆನಪಿಸಿಕೊಳ್ಳಬಹುದು). ಒಂದು ಆಲೋಚನೆ ಕೃತಿಯ ರೂಪಕ್ಕೆ ಇಳಿದು, ಅದು ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳುವಾಗ ಅದು ಅದರದೇ ಆದ ಅನನ್ಯತೆಯನ್ನು ಉಳಿಸಿಕೊಳ್ಳುತ್ತದೆಯೆಂದು ಹೇಳಲು ಬರುವುದಿಲ್ಲ. ಅನ್ವಯವು ಕೂಡಾ ಪ್ರಸ್ತಾವನೆಯ ಅಥವಾ ಪೀಠಿಕೆಯ ರೂಪದಂತೆ ಇರಲು ಕಾರಣವಿಷ್ಟೆ: ಅದು ಕೂಡಾ ಸಮಗ್ರವಾಗಿ; ಇದಮಿತ್ಥಂ ಎಂಬ ರೂಪದಲ್ಲಿರಲು ಸಾಧ್ಯವಿಲ್ಲ. ಡೆರಿಡಾ ನೀಶೆಯ ವಾದವನ್ನು ಅನುಸರಿಸಿ ಹೀಗೆ ಹೇಳುತ್ತಾನೆ; 'ಪ್ರತಿಯೊಂದು ತಾತ್ವಿಕ ಚಟುವಟಿಕೆಯು ಅನ್ವಯವನ್ನು ಆಧರಿಸಿರುತ್ತದೆ. ಮತ್ತು ಸತ್ಯವನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತದೆ. ಇದರ ಪರಿಣಾಮವಾಗಿ ವಸ್ತುವು ಅದ ಅಭಿವ್ಯಕ್ತಿ ಕ್ರಮದೊಂದಿಗೆ ಮುಖ್ಯವಾಗುತ್ತದೆ'. 'ಇಲ್ಲಿರುವ ಮುಖ್ಯ ನಿಲುವೆಂದರೆ ಸತ್ಯವು ಕೂಡಾ ವಸ್ತು ಆಧಾರಿತ ಮತ್ತು ಅನ್ವಯ ಆಧಾರಿತ ನಿಲುವುಗಳನ್ನು ಪ್ರತಿನಿದಿಸುತ್ತವೆ' ಹೀಗಿದ್ದರೂ ಡೆರಿಡಾನ ಪ್ರಕಾರ ನೀಶೆಯ ಮುಖ್ಯ ಪ್ರಶ್ನೆಯಿರುವುದು ಸುಪ್ತಪ್ರಜ್ಞೆಯ ಮೇಲೆಯೇ. ನೀಶೆ ಹೇಳುವಂತೆ ನಮ್ಮ ಎಲ್ಲಾ ಆಲೋಚನೆಗಳು, ನಾವು ಕೈಗೊಳ್ಳುವ ತೀರ್ಮಾನ, ನಮ್ಮ ತುಲನಾತ್ಮಕ ದೃಷ್ಟಿ ಎಲ್ಲವು ಮೊದಲೇ ನಿರ್ಧರಿಸಲಾಗಿರುವಂಥದ್ದು: ನವ್ಯವಿಮರ್ಶೆಯು 'ವಸ್ತು

ನಿಷ್ಠ'ವೆಂಬ ಪರಿಭಾಷೆಯನ್ನು ತಂದು ಕಾವ್ಯವನ್ನು ವಸ್ತುನಿಷ್ಠವಾಗಿ ಓದಬೇಕೆಂದು ಹೇಳಿಕೊಟ್ಟಿತು. 'ವಸ್ತು'ವು ರಚನಾಕ್ರಮದ ಒಳಗಡೆಗೆ ಇದೆಯೆಂದು ಅದು ಪರಿಭಾವಿಸಿತು. ಆದರೆ ನೀಶೆಯ ವಾದವನ್ನು ಗಮನಿಸಿದರೆ ಹಾಗೆಂದು ಹೇಳುವಂತಿಲ್ಲ. ವಸ್ತುನಿಷ್ಠವಾಗಿ ಕೃತಿಯೊಂದನ್ನು ಓದಲು ಸಾಧ್ಯವಿಲ್ಲ. ಯಾಕೆಂದರೆ ಓದುವ ಸಂದರ್ಭದ ನಮ್ಮ ಆಲೋಚನೆಗಳು ಕೂಡಾ ಪೂರ್ವ ನಿರ್ಧಾರಿತವಾದ ಅಂಶಗಳನ್ನು ಆಧರಿಸಿಕೊಂಡಿರುತ್ತದೆ.

ಇನ್ನೊಂದು ಪ್ರಮುಖ ವಾದವು ಬಂದಿರುವುದು ನೈತಿಕತೆ ಬಗ್ಗೆ. ಈ ಮಾತನ್ನು ಪಶ್ಚಿಮದ ಹಿನ್ನೆಲೆಯ ಮಾತಾಗಿ ಬಳಸಲಾಗಿದೆ. ಮುಖ್ಯವಾಗಿ ಕ್ರಿಶ್ಚಿಯನ್ ಫಿಲಾಸಫಿಯ ಹಿನ್ನೆಲೆಯಿಂದ ಇದನ್ನು ಅರ್ಥವಿಸಬೇಕು. ತತ್ತ್ವಜ್ಞಾನದ ಅರ್ಥವಂತಿಕೆಯಾಗಿ ಗಮನಿಸಬೇಕು. ಪಶ್ಚಿಮದ ಕ್ರಿಶ್ಚಿಯನ್ ಮೂಲದ ತತ್ತ್ವಜ್ಞಾನವು 'ನೈತಿಕತೆಯ ಚರಿತ್ರೆ'ಯನ್ನು ವಿಶಿಷ್ಟವಾಗಿ ಕಟ್ಟಿಕೊಡಲು ಪ್ರಯತ್ನಿಸುತ್ತದೆ ಎಂಬುದನ್ನು ಗಮನಿಸಬೇಕು. ನೀಶೆಯು ನೈತಿಕತೆಯ ಚರಿತ್ರೆಯನ್ನು ಒಂದು ಪಠ್ಯವೆಂದು ಅಂಗೀಕರಿಸಿಕೊಂಡು ಓದುತ್ತಾನೆ. ಇದರ ಮೂಲಕ ಒಂದು ನೈತಿಕತೆಯ ಪಠ್ಯವನ್ನು ಯಶಸ್ವಿಯಾದ ಅರ್ಥವಂತಿಕೆಯ ಮೂಲಕ ಅನ್ವಯಗೊಳಿಸುತ್ತಾನೆ. ಆತನ ಪ್ರಕಾರ ಸಂಜ್ಞೆಗಳು ಕೂಡಾ ಅಷ್ಟೆ: ಕೆಲವು ಅಧಿಕಾರಯುತವಾಗಿ ಕೆಲಸ ಮಾಡುತ್ತವೆ. ಕೆಲವು ಸಂಜ್ಞೆಗಳಿಗೆ ಅಷ್ಟೊಂದು ಅಧಿಕಾರವಿರುವುದಿಲ್ಲ. ಇದು ಸಾಧ್ಯವಾಗುವುದು ಒಂದು ಸಂಜ್ಞೆಯು ಸ್ಥಾಪಿಸಿಕೊಳ್ಳುವ ಅರ್ಥವಂತಿಕೆಯ ದೆಸೆಯಿಂದ. ಅದರ ಕ್ರಿಯಾತ್ಮಕವಾದ ಸ್ವರೂಪದಿಂದ. ಹೀಗಾಗಿ ಎಲ್ಲಾ ಪರಿಕಲ್ಪನೆಗಳು ಕೂಡಾ ಸಂಜ್ಞಾಶಾಸ್ತ್ರದ ಬೇರುಗಳನ್ನೂ ಹೊಂದಿರುತ್ತವೆ.

ನಮ್ಮಲ್ಲಿ 'ನೈತಿಕತೆಯ ಚರಿತ್ರೆ' ಯೆಂಬುದನ್ನು ಕಟ್ಟಲಾಗಿದೆ. ಅದಕ್ಕೆ ನಿರ್ದಿಷ್ಟ ಅರ್ಥವಂತಿಕೆಯನ್ನು ಹೇರಲಾಗಿದೆ. ಆದರೆ ನೀಶೆಯು ಅದನ್ನು ನಿರಚನಗೊಳಿಸಿ, ಅದರ ಅರ್ಥವಂತಿಕೆಯನ್ನು ಗ್ರಹಿಸಲು ಯತ್ನಿಸುತ್ತಾನೆ. ಆದರೆ ನೈತಿಕತೆಯೆಂಬುದನ್ನು ನೀಶೆ ಅಲ್ಲಗೆಳೆಯುತ್ತಿರುವುದು ಕೂಡ ಗಮನಾರ್ಹ ಸಂಗತಿಯಾಗಿದೆ. ಆ ಸಂದರ್ಭದಲ್ಲಿ **ಅರ್ಥಕ್ಕಿಂತಲೂ ಅರ್ಥವಿಸಿಕೊಳ್ಳುವ ಪ್ರಕ್ರಿಯೆಯು ನೀಶೆಗೆ ಮುಖ್ಯವಾಗಿ ಕಾಣುತ್ತದೆ.** ಇದರ ಜೊತೆಗೆ 'ಸಂಜ್ಞೆ'ಗಳ ಬಗೆಗಿನ ನೀಶೆಯ ವಾದವು ಗಮನಾರ್ಹವಾದುದು. ಅರ್ಥವಿಸಿಕೊಳ್ಳುವ ಸಂದರ್ಭದಲ್ಲಿ ಈ ಅಧಿಕಾರಯುತವಾದ ಸಂಜ್ಞೆಗಳು ಕ್ರಿಯಾತ್ಮಕವಾದ ಸ್ವರೂಪವನ್ನು ಹೊಂದಿರುತ್ತವೆ. ಹೀಗಾಗಿ ಇವು ಹೆಚ್ಚು ಪರಿಣಾಮಕಾರಿ ಕೂಡಾ. ಅದರೊಂದಿಗೆ ಪ್ರತಿಯೊಂದು ಪರಿಕಲ್ಪನೆಗಳು ಕೂಡಾ ಸಂಜ್ಞಾಶಾಸ್ತ್ರದ ಬೇರುಗಳನ್ನು ಹೊಂದಿರುವುದರಿಂದ ಗೃಹೀತ ಅರ್ಥವಂತಿಕೆಗಳ ಮೇಲೆ ಪರಿಣಾಮಬೀರುತ್ತವೆ. ಇಷ್ಟಿದ್ದರೂ ನೀಶೆಗೆ ರೂಪಕದ ಇತಿಮಿತಿಯ ಅರಿವಿದೆ.

ರಚನಾವಾದಿಗಳು ವಿಷಯ ಮತ್ತು ವಸ್ತುವನ್ನು ಸರಳ ದ್ವಂದ್ವದಲ್ಲಿ ಇರಿಸಿ ನೋಡಿದರಷ್ಟೆ? ನೀಶೆಯೂ ವಿಷಯದ ಕುರಿತು ಹೇಳುವಾಗ 'ವಿಷಯ' ಎನ್ನುವುದು ಒಂದು ಏಕೀಕರಿಸಲಾಗಿರುವ ಪರಿಕಲ್ಪನೆ. ಇದರ ಪರಿಣಾಮವಾಗಿ ಅಲ್ಲಿ ಅನ್ವಯವು ಬೇಕಾಗುತ್ತದೆ. ನೀಶೆಯು ಮುಖ್ಯವಾಗಿ ಹೇಳುವುದು . 'ಭಾಷಿಕಸ್ವರೂಪ' (Linguistic figurative) ಬರಹಕ್ಕೆ ಇಳಿಯುವುದು ಅತಿ ಪ್ರಾಚೀನವಾದ ಅಭ್ಯಾಸಗಳಲ್ಲಿ ಒಂದು . ಅಂದರೆ ಆಲೋಚನಾ ಕ್ರಮದ ಹಿಂದೆ ಯೋಚನೆ ಇರುತ್ತದೆ. ಅದು ನಮ್ಮ ವ್ಯಾಕರಣ ಪದ್ಧತಿಯೊಳಗೆ ರೂಪು ತಳೆಯುತ್ತದೆ. ಇದರೊಂದಿಗೆ ನೀಶೆಯು ಹೇಳುವಂತೆ ರೂಪಕಗಳಲ್ಲಿ ತರುವ ಸಾಮ್ಯತೆಯು ಸಂವೇದನೆಗಳಿಗೆ ಸಂಬಂಧಿಸಿರುತ್ತದೆ. ಪ್ರತೀಕ ಆಮೇಲೆ ಪದ ನಂತರ ಪರಿಕಲ್ಪನೆಗಳು ಉಂಟಾಗುತ್ತವೆ. ಯಾವುದೇ ಆಲೋಚನೆಗಳು ವ್ಯಾಕರಣ ಬದ್ಧವಾಗಿ ರೂಪುಗೊಳ್ಳುವುದಿಲ್ಲ. ಮತ್ತು ಆಲೋಚನೆಗಳಿಗೆ ನಿರ್ದಿಷ್ಟವಾದ ಚೌಕಟ್ಟು ಎಂಬಂತಿಲ್ಲ.

ಅದು ಲಹರಿಗೆ ರೂಪವಿಲ್ಲವಾದರೂ, ನಮ್ಮ ಆಲೋಚನೆಯನ್ನು ಮಾತಿನಲ್ಲಿ ಹೇಳುವಾಗ ನಮ್ಮ ವ್ಯಾಕರಣ ರೂಪಕ್ಕೆ ಅದನ್ನು ಬದ್ಧಗೊಳಿಸುವ ಪ್ರಯತ್ನ ಮಾಡುತ್ತೇವೆ. ಯಾವುದನ್ನು ನಾವು ಭಾಷೆಯ ರೂಪವೆಂದು ಕರೆಯುತ್ತೇವೋ ಅವೆಲ್ಲಾ ಅಂತಿಮವಾಗಿ ಬೇರೆ 'ಅಂತರ'ಗಳನ್ನು ರೂಪಿಸುವ ನೆಲೆಗಳೇ. ಆಗಿರುತ್ತವೆ

ಈ ಮೇಲಿನ ಮಾತುಗಳಲ್ಲಿ ನೀಶೆಯು ಪ್ರತೀಕ ಪದ ಮತ್ತು ಪರಿಕಲ್ಪನೆಗಳ ನಡುವಣ ಸಂಬಂಧವನ್ನು ನಿರ್ವಚಿಸುತ್ತಾನೆ. ನೀಶೆಯು ಮತ್ತೊಂದು ಸಂದರ್ಭದಲ್ಲಿ ಹೇಳಿರುವಂತೆ ಭವಿಷ್ಯದ ಅಧಿಕಾರದ ಬಗ್ಗೆ ಇರುವ ವ್ಯಾಮೋಹವು ಅಮೂರ್ತ ಮತ್ತು ಅಪ್ರಾದೇಶಿಕ. ಕಾರಣದಿಂದ ಒಂದು ಪದಕ್ಕೆ ನಾವು ಕೊಡುವ ಅನ್ವಯವು ಅದರದೇ ಅದ ರೂಪವನ್ನು ಹೊಂದಿರುತ್ತದೆ. ಈ ಅನ್ವಯವು 'ಇರು'ವುದನ್ನು ಸೂಚಿಸುವುದಕ್ಕಿಂತ 'ಆಗು' ವಿಕೆಯನ್ನು ಸೂಚಿಸುತ್ತದೆ. ಈ ಅಗುವಿಕೆಯ ಪರಿಣಾಮಕ್ಕೆ ಸಂಬಂಧಿಸಿದುವಾಗಿದೆ. 'ಆಗುವಿಕೆ'ಯು ಪ್ರಶ್ನೆಯೆನ್ನುವುದು ಸರಳವಲ್ಲ, ನಾವು ಜೀವನವನ್ನು ಪ್ರಾರಂಭಿಸಿ ಪ್ರತಿಯೊಂದಕ್ಕೂ ಈ 'ಆಗುವಿಕೆ' ಯನ್ನು ಅವಲಂಬಿಸಿಕೊಂಡಿರುತ್ತೇವೆ. 'ಆಗು'ವುದು ಪ್ರಮುಖ ನೆಲೆಯಾಗಿರುವುದರಿಂದ ನೀಶೆಯ ತತ್ತ್ವಜ್ಞಾನವು ಆ ಮೂಲಕವೇ ಹೊರಡುತ್ತದೆ.[2]

ಡೆರಿಡಾ ಹೇಳುವಂತೆ ಫ್ರಾಯ್ಡ್ ಮತ್ತು ನೀಶೆ 'ಪ್ರಜ್ಞೆ' ಯನ್ನು ಪ್ರಶ್ನಿಸಿದರು. ನೀಶೆಗೆ ಸುಪ್ತ ಪ್ರಜ್ಞೆಯೆನ್ನುವುದು ಮುಖ್ಯವಾಯಿತು. ಆತನ ಪ್ರಕಾರ ಸುಪ್ತಪ್ರಜ್ಞೆಯು ಪ್ರಮುಖ ಚಟುವಟಿಕೆಯ ಭಾಗವಾಗಿದೆ. ನೀಶೆಯ ಪ್ರಕಾರ ಎಲ್ಲಾ ಯೋಚನೆಗಳು, ತೀರ್ಮಾನ; ಅಭ್ಯಿವ್ಯಕ್ತಿ, ತುಲಾನಾತ್ಮಕತೆ ಮೊದಲಾದವು ಪೂರ್ವನಿಶ್ಚಿತವಾಗಿರುತ್ತದೆ. ಅಷ್ಟೇ ಅಲ್ಲದೆ ಸಮಾನವಾಗಿ ಪರಿಗ್ರಹಿಸುವ ನೆಲೆಗಳಿರುತ್ತವೆ. ಒಂದಕ್ಕೊಂದನ್ನು ಹೋಲಿಸುವ ಪ್ರಕ್ರಿಯೆಗಳು ಅನೇಕ ಸಂದರ್ಭದಲ್ಲಿ ಯಾಂತ್ರಿಕವಾಗಿರುತ್ತವೆ.

ಯಾವುದೇ ಘಟಕಗಳಾಗಲೀ , ಯಾವುದೇ ಸ್ವಗತಗಳಾಲಿ; ಅವು ನಿರ್ದಿಷ್ಟ ಸ್ವರೂಪದಲ್ಲಿ ಇರುವುದಿಲ್ಲ. ಅವೆಲ್ಲಾ ನಮ್ಮ ಪ್ರಸ್ತಾವನೆಯನ್ನು ಅವಲಂಬಿಸಿರುತ್ತವೆ. 'ಮೌಲ್ಯ'ದ ಪ್ರಶ್ನೆಯಾದರೂ ಅಷ್ಟೆ: ಅವುಗಳು ಹಿಗ್ಗಬಹುದು /ಕುಗ್ಗಬಹುದು. ಈ ಮೌಲ್ಯಗಳ ಪ್ರಶ್ನೆಯು ಕೇಂದ್ರಗಳಿಗೆ ಸಂಬಂಧಿಸಿವೆ. 'ಕೃತಿಯ ಮೌಲ್ಯ' ಜೀವನಮೌಲ್ಯ 'ಮೌಲ್ಯಕ್ಕಾಗಿ ಹೋರಾಟ' 'ಪುನರ್ ಮೌಲ್ಯ ಮಾಪನ' ಈ ತರಹದ ಮಾತುಗಳನ್ನು ನಾವು ಬಹಳ ಬಾರಿ ಬಳಸುತ್ತೇವೆ. ಆದರೆ ಈ 'ಮೌಲ್ಯ' ಎನ್ನುವುದು ಸಂವಾದಿಯಾದ ರೂಪವಾಗಿದೆ. ( ಯಾರು ಹೇಗೆ ಬೇಕಾದರೂ ಬಳಸುವುದು ಸಾಧ್ಯ). ಹೀಗಾಗಿ 'ಮೌಲ್ಯ' ಎನ್ನುವುದಕ್ಕೆ ಒಂದು ಕೇಂದ್ರವನ್ನು ನಾವು ನಮಗೆ ಬೇಕಾದಂತೆ ಸಂಯೋಜಿಸುತ್ತಿರುತ್ತೇವೆ. ಹೀಗಾಗಿ 'ಮೌಲ್ಯ'ದ ಪ್ರಶ್ನೆಯು ಬಂದಂತೆಲ್ಲಾ ಅದಕ್ಕೆ ಬಹುಕೇಂದ್ರಗಳು ರೂಪುಗೊಳ್ಳುತ್ತವೆ. ಘಟಕಗಳೂ 'ಆಗು'ತ್ತವೆ. (ಆಗುವ ಪ್ರಕ್ರಿಯೆಯು ಭಾಷೆಗೆ ಸಂಬಂಧಿಸಿದೆ). ನೀಶೆಯ ಹೇಳುವಂತೆ, 'ರೂಪಕ ಬೇರೆ ; ಪರಿಕಲ್ಪನೆಗಳು ಬೇರೆ ಎಂದು ಹೇಳುವಂತಿಲ್ಲ'. ಹಾಗೆಯೇ ನೀಶೆ (ದೇಹ ಮತ್ತು ಮನಸ್ಸು) ಬೇರೆಯೆಂಬ ದ್ವಂದ್ವಗಳನ್ನು ನಿರಾಕರಿಸುತ್ತಾನೆ. ಇದನ್ನೇ ಗ್ರಾಮೆಟಾಲಜಿಯಲ್ಲಿ ಡೆರಿಡಾ ಬೇರೊಂದು ರೀತಿಯಿಂದ ಪ್ರತಿಪಾದಿಸುತ್ತಾನೆ. ವಿಷಯ ಮತ್ತು ವಸ್ತು ಎರಡೂ ಅನ್ವಯವನ್ನು ಅವಲಂಬಿಸಿಕೊಂಡಿರುತ್ತದೆಯೆಂಬುದು ಡೆರಿಡಾನ ವಾದ. ಯಾವುದೇ ವಸ್ತು ಕೂಡಾ ಅದರಷ್ಟಕ್ಕೆ ಅದು ಸ್ವಯಂ ಸಂಪೂರ್ಣವಲ್ಲ. ಅವು ಅನ್ವಯವನ್ನು ವಲಂಬಿಸಿಕೊಂಡಿರುವುದರಿಂದ ಪ್ರತಿಯೊಂದು ಸಂಗತಿಗಳೂ ವಿಷಯ ನಿಷ್ಠವಾಗಿರುತ್ತವೆ. ವಿಷಯವು ಕೂಡಾ ಯಾವುದನ್ನೋ ಕೊಟ್ಟಿರುವ ಪ್ರಸಕ್ತಿಯಲ್ಲಿಲ್ಲ . ಅವು ಕೂಡಾ ಅನ್ವೇಷಣೆಗೆ ಸಂಬಂಧಿಸಿದವುಗಳೇ ಆಗಿರುತ್ತವೆ. ಸಿದ್ಧಾಂತ ಮತ್ತು ಅದರ ಅನ್ವಯವೆಂಬ ಪ್ರಭೇದ ಕೂಡಾ ಡೆರಿಡಾಗೆ ಅಪಾಯಕಾರಿಯಾದ ವ್ಯತ್ಯಾಸದಂತೆ ಕಾಣುತ್ತದೆ. ಸಿದ್ಧಾಂತ ಬೇರೆ

ಅನ್ವಯಕ್ರಮವು ಬೇರೆ ಎಂಬ ಪರಿಕಲ್ಪನೆಯು ಶುದ್ಧವಾದ, ಪೂರ್ಣರೂಪಿಯಾದ ನೆಲೆಯಾಗಿರುವುದಿಲ್ಲ. ಜ್ಞಾನ ಮತ್ತು ಅಲೌಕಿಕಕ್ಕೆ ಇರುವ ಸಮಸ್ಯೆಯಂತೆ ಇದು ಕೂಡಾ. ಅನ್ವಯವು ಸಿದ್ಧಾಂತವನ್ನು ಹೊಂದಿಕೊಂಡಿರುತ್ತದೆ. ಅದು ಒಂದರ್ಕ್ಕೊಂದು ಬದಲಾವಣೆಗೊಳ್ಳುವ ಸಾಧ್ಯತೆಗಳಲ್ಲಿ ಒಂದು.

ಡೆರಿಡಾ ಹೇಳುತ್ತಾನೆ 'ತತ್ತ್ವಜ್ಞಾನವು ರೂಪಿಸಿಕೊಟ್ಟಂತೆ ನಾವು ಸರಳ ದ್ವಂದ್ವ ಅಥವಾ ಪರ- ವಿರೋಧದ ಕಲ್ಪನೆಗಳನ್ನು ಕಟ್ಟಿಕೊಂಡಿದ್ದೇವೆ. ನಾವು ಮಾತಾಡುವ ಭಾಷೆಯೂ ಅದಕ್ಕೆ ಅನುಗುಣವಾಗಿ ರೂಪುಗೊಂಡಿದೆ. ತತ್ತ್ವಜ್ಞಾನವು ಭಾಷೆಯಲ್ಲಿ ಮೂರ್ತ ರೂಪಕ್ಕೆ ಬರುತ್ತದೆ. ಹೀಗೆ ಮೂರ್ತರೂಪಕ್ಕೆ ಬರುವಾಗ 'ಅಂತರ'ವು ಸೃಷ್ಟಿಯಾಗುತ್ತದೆ. ('ಅಂತರ'ವು ಒಂದಕ್ಕೆ ಮತ್ತೊಂದನ್ನು ವ್ಯತ್ಯಾಸಗೊಳಿಸುತ್ತದೆ). ಉದಾಹರಣೆಗೆ ಬುದ್ಧಿವಂತಿಕೆಯನ್ನು ಸಂವೇದನಾಶೀಲತೆಗಿಂತ ಭಿನ್ನವಾಗಿ ನೋಡಲಾಗುತ್ತದೆ. ಇಲ್ಲಿ ಸಂವೇದನಾಶೀಲತೆಯು ಭಿನ್ನತೆಯನ್ನು ಸೂಚಿಸುತ್ತದೆ. ಪರಿಕಲ್ಪನೆಯು ಅಂತರ್‌ದೃಷ್ಟಿಗಿಂತ ಭಿನ್ನವಾಗಿರುತ್ತದೆ. ಮನಸ್ಸು ಜೀವನಕ್ಕಿಂತ ಭಿನ್ನ. ಸಂಸ್ಕೃತಿಯು ನಿಸರ್ಗಕ್ಕಿಂತ ಭಿನ್ನ . ಈ ರೀತಿಯ ಭಿನ್ನತೆಯನ್ನು ಸಹಜವೆಂಬಂತೆ ಪರಿಭಾವಿಸಲಾಗಿದೆ. ನೀಶೆಯ ಪ್ರಕಾರ ಈ ರೀತಿಯ ನಿಲುವುಗಳು ಲಕ್ಷಣವನ್ನು ಆಧರಿಸಿಕೊಂಡಿರುವ ನಿಲುವುಗಳಾಗಿವೆ. ಇದರೊಂದಿಗೆ ಒಂದಕ್ಕೊಂದನ್ನು ಮರೆಮಾಡುವ ಸಾಧ್ಯತೆಗಳು ರೂಪುಗೊಳ್ಳುತ್ತವೆ. ಸರಳವಾದಿ ದ್ವಂದ್ವದ ಬಗೆಗಿನ ನಿಲುವನ್ನು ಮೇಲಿನ ಡೆರಿಡಾನ ವಾಕ್ಯಗಳು ಸ್ಪಷ್ಟಪಡಿಸುತ್ತವೆ. ವಾಸ್ತವವಾಗಿ ನಿರಚನ ಸಿದ್ಧಾಂತದಲ್ಲಿ ಅಂತರದ ಬಗ್ಗೆ ನಿರಾಕರಣೆಯ ಧ್ವನಿಯಿದೆಯೆಂಬುದು ಗಮನಾರ್ಹ. ಒಂದರ ಮೇಲೆ ಮತ್ತೊಂದು ಅಥವಾ ಒಂದಕ್ಕಿಂತ ಮತ್ತೊಂದು ಭಿನ್ನವೆಂಬ ನಿಲುವಿನ ಬಗ್ಗೆ ನೀಶೆಗೆ ಸಹಮತವಿಲ್ಲ. ಈ ರೀತಿಯ ದ್ವಂದ್ವದ ಕಲ್ಪನೆಗಳನ್ನು ತಾತ್ತ್ವಿಕವಾಗಿ ಕಟ್ಟಲಾಗಿದೆ. ಅಂದರೆ ಮನಸ್ಸಿಗೆ ಮತ್ತು ಜೀವನ ವಿಧಾನಕ್ಕೆ ಪ್ರಾತಿನಿಧಿಕವಾದ ವ್ಯತ್ಯಾಸವಿದೆಯೆ? ಬುದ್ಧಿವಂತಿಕೆ ಮತ್ತು ಸಂವೇದನಾ ಶೀಲತೆಯು ಜೊತೆ ಜೊತೆಗೆ ಬರುವುದಿಲ್ಲವೆ ? : ಹೀಗೆ 'ಕಟ್ಟಲಾಗಿರುವ' ವಿಚಾರ ಪ್ರಣಾಲಿಯ ದೆಸೆಯಿಂದ ನಾವು ಎಲ್ಲವನ್ನೂ ಒಡೆದು ನೋಡುತ್ತೇವೆ. ನಿರಚನ ಸಿದ್ಧಾಂತವು ಈ ರೀತಿಯಲ್ಲಿ ಕಟ್ಟಲಾಗಿರುವ ಸಂಗತಿಯನ್ನು ಭೇದಿಸುತ್ತದೆ.

ಡೆರಿಡಾ ಮತ್ತೊಂದು ಸಂದರ್ಭದಲ್ಲಿ ಮೇಲಿನ ಮಾತಿಗೆ ಅನ್ವಯವಾಗುವಂತೆ ನೀಶೆಯ ಮಾತನ್ನೇ ಉಲ್ಲೇಖಿಸುತ್ತಾನೆ. 'ನೀಶೆಯು ಹೇಳುವಂತೆ ನಾವು ಶೈಲಿಯನ್ನು ಬದಲಾಯಿಸಿಕೊಳ್ಳಬೇಕಾಗಿದೆ. ಒಂದು ವೇಳೆ ಶೈಲಿಯೇನಾದರೂ ಇದ್ದಲ್ಲಿ ಅದು ಬಹುತ್ವವಾಗಿರಬೇಕು' . ಅಂದರೆ ಶೈಲಿಯು ಕೂಡಾ ನಿರ್ದಿಷ್ಟವಾದ; ಏಕಕೇಂದ್ರಿತವಾದ ನಿಲುವನ್ನು ಪ್ರತಿಪಾದಿಸುವಂತೆ ಇರಬಾರದು. ಅಲ್ಲಿ ಬಹುತ್ವವಿದ್ದರೆ ಯಾವುದನ್ನೂ ಅದು ನಮ್ಮ ಮೇಲೆ ಹೇರುವುದಿಲ್ಲ. ಅಲ್ಲಿ ಅನೇಕ ಸಾಧ್ಯತೆಗಳು ರೂಪುಗೊಳ್ಳುತ್ತವೆ. ಅದರ ಮುಖೇನ ' ಹಲವು' ದೃಷ್ಟಿಕೋನಗಳು ಸೃಷ್ಟಿಯಾಗುತ್ತವೆ.

ನಾವು 'ಜ್ಞಾನ' ವೆಂಬುದನ್ನು ಒಂದು ಅಲೌಕಿಕವಾದ ರೂಪವೆಂದು ಪರಿಭಾವಿಸುತ್ತೇವೆಯಷ್ಟೆ? ಅದನ್ನು ಒಂದು ರೀತಿಯ ಕನಸು ಎಂದು ನಿರಚನ ಸಿದ್ಧಾಂತವು ಹೇಳುತ್ತದೆ. ಜ್ಞಾನವೆಂಬುದಕ್ಕೆ ಒಂದು ನಿರ್ದಿಷ್ಟತೆಯು ಇರುತ್ತದೆಯೆ? ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ ಜ್ಞಾನವೆಂದು ಕರೆಯುವಲ್ಲಿ ನಾವು ಪುಸ್ತಕದ ಗ್ರಹಿಕೆಯನ್ನು ಮಾತ್ರ ಹೇಳುತ್ತಿರುತ್ತೇವೆ. ಆದರೆ ವಾಸ್ತವವಾಗಿ ಹಾಗಲ್ಲ ಎಂದು ನಿರಚನ ಸಿದ್ಧಾಂತವು ಹೇಳುತ್ತದೆ. 'ಜ್ಞಾನ' ಎನ್ನುವುದನ್ನು ನಾವು ಸರಳಗೊಳಿಸಿ ಹೆಚ್ಚು ಪುಸ್ತಕಗಳನ್ನು ಓದಿದವನು ನಮ್ಮ ಪ್ರಕಾರ ಜ್ಞಾನಿ. ಆದರೆ ನಿರಚನವು ಈ ತರಹದ ಮಾತುಗಳನ್ನು ಅಲ್ಲಗಳೆಯುತ್ತದೆ. ನಮಗೆ ಗೊತ್ತಿಲ್ಲದ ಸಂಗತಿಯನ್ನು ಹೇಳುತ್ತಿದ್ದಾರೆ ಎನ್ನುವ ಕಾರಣಕ್ಕೆ ಅವರನ್ನು ನಾವು ಜ್ಞಾನಿಗಳೆಂದೂ

ಗುರುತಿಸಲು ಸಾಧ್ಯವಿಲ್ಲ 'ಜ್ಞಾನಕ್ಕೆ ಅಧಿಕೃತ ರೂಪದ' ವಿದೆಯೆಂದು ಹೇಳುವುದೇ ಕಷ್ಟ.

ಡೆರಿಡಾ ಮತ್ತೊಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ 'ಪ್ರತಿಯೊಂದು ಪಠ್ಯವು ಸಹಾ ತೆರೆದಿರುತ್ತದೆ. ಕೆಲವೊಂದನ್ನು ಅಭಿವ್ಯಕ್ತಿಸುತ್ತದೆ. ನಮಗೆ ಗೊತ್ತಿಲ್ಲದಂತೆಯೇ ಪಠ್ಯವು ಅರ್ಥಕ್ಕೆ ಅನ್ವಯಿಸುವಂತೆ ರೂಪುಗೊಂಡಿರುತ್ತದೆ'. ಅಂದರೆ ಪ್ರತಿಯೊಂದು ಪಠ್ಯವು ಮುಕ್ತವಾದುದು. ಅದು ಸದಾ ಕಾಲವು ತೆರೆದಿರುತ್ತದೆ. ಓದುವ ಸಂದರ್ಭದಲ್ಲಿ ಅದನ್ನು ಯಾರು ಬೇಕಾದರೂ ಓದಬಹುದು ಮತ್ತು ಪ್ರತಿಯೊಂದು ಪಠ್ಯವು ಕೆಲವೊಂದನ್ನು ಅಭಿವ್ಯಕ್ತಿಸುತ್ತದೆ. ಹೀಗೆ ಅಭಿವ್ಯಕ್ತಿಸುವಾಗ ಅದಕ್ಕೆ ಅರ್ಥವು ಇರುತ್ತದೆ.

ಸಾಮಾನ್ಯವಾಗಿ ಬರವಣಿಗೆಯೆನ್ನುವುದು ಒಂದು ರೀತಿಯಿಂದ ಮೃತಸ್ವರೂಪಿಯಾದುದು. ಯಾಕೆಂದರೆ ಬರೆದ ಮೇಲೆ ಅಲ್ಲಿ ಮಾತಾಡುವುವವನು ಗೈರು ಹಾಜರಿಯಾಗಿರುತ್ತಾನೆ. ಬರವಣಿಗೆಯೆಂಬುದನ್ನು ರೂಪಕದ ರೀತಿಯಲ್ಲಿ ಅರ್ಥವಿಸಿಕೊಂಡರೆ ಅದು ಸಹಜ, ಪವಿತ್ರ ಹಾಗೂ ಮೌಲ್ಯದ ಪ್ರಶ್ನೆಯೂ ಆಗಿರುತ್ತದೆ. ಅದರಲ್ಲಿ ಭಾವನೆಯಿರುತ್ತದೆ. ಹೃದಯವಿರುತ್ತದೆ. ಯಾಕೆಂದರೆ ಮನುಷ್ಯರು ಕೆಲವು ವಿಷಯಗಳಲ್ಲಿ ಆರಾಮವಾಗಿರುಲು ಬಯಸುತ್ತಾರೆ. ಅಭಿವ್ಯಕ್ತಿಗೊಳಿಸಲು ಇಚ್ಛಿಸುತ್ತಾರೆ. ಸಾಹಿತ್ಯದ ದೃಷ್ಟಿಕೋನದಿಂದ ನೋಡಿದರೆ ಬರವಣಿಗೆಯು ಬರಹಗಾರನ ಗೈರುಹಾಜರಿಯಲ್ಲಿ ಉಂಟಾಗಿರುವ ಸೂಚನೆಯಾಗಿರುತ್ತದೆ. ಆ ಸಂದರ್ಭದಲ್ಲಿ ತಿರಸ್ಕೃತನಾಗಿ, ಬರವಣಿಗೆಯ ರೂಪಕವು ಸ್ವೀಕೃತವಾಗುತ್ತದೆ. ಬರಯುವುವೇ ನಮ್ಮ ಗೈರುಹಾಜರಿಯಾಗುತ್ತದೆಯೆಂಬ ಕಾರಣಕ್ಕೆ. ಆದರೆ ಮಾತಿನ ಪ್ರಕ್ರಿಯೆಯು ಹಾಗಲ್ಲ. ಮಾತಾಡುವುದು ಮುಖಾಮುಖಿಯಾಗುವ ಸಂದರ್ಭದಲ್ಲಿ. ಹೀಗಾಗಿಯೇ ನಾವು ಮಾತಾಡುವಾಗ ಏರಿಳಿತ ಇರುತ್ತದೆ. ಬರವಣಿಗೆಯು ಹೀಗಲ್ಲ.

ಡೆರಿಡಾನ ಪ್ರಕಾರ, ಬರಹ ಕೂಡಾ ಅನೇಕ ಅರ್ಥವಂತಿಕೆಗಳನ್ನು ಒಳಗೊಂಡಿರುತ್ತದೆ. ಅಂದರೆ ಅನೇಕ ಕೋನಗಳಿವೆ. ಸಾಹಿತ್ಯದ ದೃಷ್ಟಿಯ ನೆಲೆಯೊಂದು ಬೇರೆ ಬಗೆಯಲ್ಲಿ ಕೆಲಸ ಮಾಡುವುದಿದ್ದರೆ ಅಲ್ಲಿ ಸೃಷ್ಟಿಯಾಗುವ ಅರ್ಥವಂತಿಕೆಯು ಬರಗಾರನ ಗೈರುಹಾಜರಿಯಲ್ಲಿ ಧ್ವನಿತಗೊಳ್ಳುತ್ತವೆ.

ಇಲ್ಲಿ ಸಾಹಿತ್ಯ ಸೃಷ್ಟಿ ಅಥವಾ ಬರವಣಿಗೆಯ ಸೃಷ್ಟಿ ಎಂಬ ಪ್ರಶ್ನೆಯನ್ನು ಪರಿಶೀಲಿಸಬೇಕು. ಬರವಣಿಗೆಯು ನಮ್ಮ ಸ್ವಂತವೆಂದು ಅನೇಕ ಸಂದರ್ಭದಲ್ಲಿ ಹೇಳುತ್ತೇವೆ. ಆದರೆ ನಮ್ಮ ಸ್ವಂತಿಕೆ ನಮ್ಮ ಬರೆವಣಿಗೆಯಲ್ಲಿ ಪ್ರಭುತ್ವವನ್ನು ಸ್ಥಾಪಿಸುತ್ತದೆಯೆ?

ಫ್ರಾಯ್ಡ್ ಸ್ವಂತದ ಪ್ರಭುತ್ವವನ್ನು ನಿರಾಕರಿಸುತ್ತಾನೆ. 'ಸ್ವಂತ' ಎನ್ನುವುದು ಪಠ್ಯದ ಸಂದರ್ಭದಲ್ಲಿ ರಚನೆಯ ಮೇಲೆ ಪ್ರಭಾವನ್ನು ಬೀರುತ್ತದೆ. ಡೆರಿಡಾ ಹೇಳುತ್ತಾನೆ : ಒಂದು ಪಠ್ಯದ ರಚನಾ ಕ್ರಮದ ಮೇಲೆ ವಿಷಯದ ಪರಿಣಾವು ಕೂಡಾ ದೊಡ್ಡದಾಗಿರುತ್ತದೆ. ಮಾನಸಿಕ ಪ್ರಕ್ರಿಯೆಯು ಬರವಣಿಗೆಯ ಸಂದರ್ಭದಲ್ಲಿ ಕ್ರಿಯಾತ್ಮಕವೆಂದು ಪರಿಗಣಿಸಿದರೆ ಈ ಮಾನಸಿಕ ಪ್ರಕ್ರಿಯೆಯು ಆರ್ಥಿಕ ಹಾಗೂ ಪ್ರಾದೇಶಿಕತೆಗೆ ಸಂಬಂಧಿಸಿದಂತೆ ರೂಪುಗೊಂಡಿರುತ್ತದೆ. ಫ್ರಾಯ್ಡ್ ಹೇಳುವಂತೆ ಈ ರೀತಿಯ ಅಭಿವ್ಯಕ್ತಿಯು ಕ್ರಮವು ಮನಸ್ಸಿನ ಸಂಗತಿಗಳಿಗೆ ಲಗತ್ತಾಗಿರುತ್ತದೆ. ಫ್ರಾಯ್ಡ್‌ನ ಪ್ರಕಾರ ಆಲೋಚನೆಯು ಭಿನ್ನಭಿನ್ನವಾದ ಘಟಕಗಳನ್ನು ಹೊಂದಿದ್ದು ಅದರ ಮೂಲಕ ಅರ್ಥವನ್ನು ಅನುಸರಿಸುತ್ತದೆ.

ಡೆರಿಡಾ ಫ್ರಾಯ್ಡ್‌ನ 'ಬಿಯಾಂಡ್ ಪ್ಲೆಶರ್ ಪ್ರಿನ್ಸಿಪಲ್'ನ ಭಾಗವೊಂದನ್ನು ಹೀಗೆ ಉಲ್ಲೇಖಿಸಿದ್ದಾನೆ. ವಾಸ್ತವದ ನಿಲುವುಗಳಿಂದ ಸಂತೋಷದ ತತ್ತ್ವವು ಭಿನ್ನವಾಗಿರುತ್ತವೆ. ಸ್ವ-ಅನ್ವತೆಯು

ಅಹಂಕಾರದ ಗುಣವಾಗಿರುತ್ತದೆ. ಅದು ತನ್ನನ್ನು ಕಾಪಾಡಿಕೊಳ್ಳಲು ಯತ್ನಿಸುತ್ತದೆ. ಸಂತೋಷವೆನ್ನುವುದು ಅಂತಿಮವಾಗಿ ತೃಪ್ತಿಯ ಅಂಶವನ್ನು ಹೊಂದಿರುತ್ತದೆ. ಅದಕ್ಕೆ ಅನೇಕ ಸಾಧ್ಯತೆಗಳೂ ಇರುತ್ತವೆ. ಡೆರಿಡಾನು ಫ್ರಾಯ್ಡ್‌ನು ಹೇಳುವ 'ಕನಸು' ; ಪದವನ್ನು ವಸ್ತುವಾಗಿ ಗ್ರಹಿಸುವ ವಿಧಾನವನ್ನು ತನ್ನ ಚರ್ಚೆಯಲ್ಲಿ ತರುತ್ತಾನೆ. ಕನಸೆಂಬುದು ಪುನರಾವರ್ತನೆಯ ಪ್ರಕ್ರಿಯೆಗಳಲ್ಲಿ ಒಂದು ಎಂಬುದನ್ನು ಗಮನಕ್ಕೆ ತಂದುಕೊಂಡು ಡೆರಿಡಾ ಬರವಣಿಗೆಯ ಕುರಿತು ಚರ್ಚಿಸುತ್ತಾನೆ. ಮೊದಲು ಆಲೋಚನೆ, ಅನಂತರ ಬರವಣಿಗೆ. ಹೀಗಾಗಿ 'ನಿರಚನ ಸಿದ್ಧಾಂತ'ದ ವಿಮರ್ಶಕ ಸ್ವತಂತ್ರನಾಗಿರುತ್ತಾನೆ. ಲೇಖಕ ಇದನ್ನು ಹೇಳುತ್ತಾನೆ, ಅದಷ್ಟನ್ನೇ ವಿವರಿಸಬೇಕು. ಕೃತಿಯೊಂದು ಇದನ್ನು ಮಾತ್ರವೇ ಹೇಳುತ್ತದೆ, ಅಷ್ಟೆ ವಿಷಯವನ್ನು ಚರ್ಚಿಸಬೇಕು ಎನ್ನುವುದು ನಿರಚನವಾದವಲ್ಲ. ಈ ದೃಷ್ಟಿಯಿಂದ 'ನಿರಚನವಾದಿ' ವಿಮರ್ಶಕ ಮುಕ್ತ.

ಡೆರಿಡಾ ಮುಂದುವರೆದು ಹೇಳಿರುವಂತೆ 'ಓದುವ ಪ್ರಕ್ರಿಯೆಗೆ ನಿರ್ದಿಷ್ಟ ಸಂಬಂಧವಿರುತ್ತದೆ. ಓದುವುದೆಂದರೆ ಲೇಖಕನನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವುದು ಎಂದರ್ಥವಲ್ಲ. ಲೇಖಕ ಭಾಷೆಯಲ್ಲಿ ಯಾವುದನ್ನು ಪ್ರಬಲವಾಗಿ ಪ್ರತಿಪಾದಿಸುತ್ತಾನೆ, ನಿರಾಕರಿಸುತ್ತಾನೆಂದು ತಿಳಿಯುವುದೂ ಅಲ್ಲ. ಓದುವುದೆಂದರೆ; (ನಿರ್ದಿಷ್ಟಸಂಬಂಧವನ್ನು ಕಾಪಾಡಿಕೊಳ್ಳುವುದೆಂದರೆ) ಅದು ನೆರಳು - ಬೆಳಕಿನ ಆಟವಲ್ಲ 'ಸಾಂಜ್ಞಿಕ ರಚನಾ ಕ್ರಮವನ್ನು ಪುನರ್ ಉತ್ಪಾದಿಸುವುದು ವಿಮರ್ಶೆಯ ನೆಲೆಯಾಗಿರುತ್ತದೆ. ಈ ಹಿಂದಿನ ವಿಮರ್ಶೆಯ ಸಂಪ್ರದಾಯಗಳು ನಿಜವಾಗಿಯೂ ಸರಿಯಾದ ಅರ್ಥದಲ್ಲಿ ಪಠ್ಯಕ್ಕೆ ತೆರೆದುಕೊಂಡಿಲ್ಲ.

**ನಿರಚನದ ಪ್ರಕಾರ ಓದುವುದೆಂದರೆ ಒಂದು ಪಠ್ಯದ ಅಂತರ್ ಪಠ್ಯಗಳನ್ನು ಗ್ರಹಿಸುವುದು.** ಇದನ್ನು ಪ್ರತಿಪಾದಿಸುವಾಗ ಡೆರಿಡಾ ಹೈಡ್‌ಗರ್ ನೆರವನ್ನು ಪಡೆದುಕೊಂಡಿದ್ದಾನೆ ಎಂದು ಹೇಳಲಾಗಿದೆ. ಫ್ರಾಯ್ಡ್ ಒಂದೆಡೆ ಹೇಳಿರುವಂತೆ, ಪ್ರತಿಯೊಂದು ಪಠ್ಯವು ತನ್ನದೇ ಮೌಲ್ಯವನ್ನು ಹೊಂದಿರುತ್ತದೆ. ಪಠ್ಯದ ಐಕ್ಯತೆಯು ಮತ್ತು ನಿಯಮಬದ್ಧತೆಯು ಕೂಡಾ ಬರಹಗಾರ ಮತ್ತು ಓದುಗರ ನಡುವೆ ಸಮತೋಲನ ಕಾಪಾಡಿಕೊಳ್ಳುವಂತೆ ಮಾಡುತ್ತದೆ. ನಿರಚನ ಸಿದ್ಧಾಂತದ ಓದುಗನು ಒಂದು ವಾಕ್ಯದ ರಚನಾ ಕ್ರಮವನ್ನು ಒಡೆಯುತ್ತಾನೆ. ಅದರ ಮೂಲವನ್ನು ಮತ್ತು ಅದರ ಅಂತ್ಯವನ್ನು ಛೇದಿಸಿ ಭಾಷೆಯನ್ನು ಸಾಮಾನ್ಯಗೊಳಿಸುತ್ತಾನೆ. ಇದನ್ನೇ ಫ್ರಾಯ್ಡ್ ಆಲೋಚನೆಯ ಅಜ್ಞಾತಜಗತ್ತು ಎಂದು ಕರೆದ. ಈ ಮೂಲಕ ಒಂದು ಪಠ್ಯದ ಮಿತಿಯನ್ನು ಒಡೆದು ಹಾಕಿದ ಹಾಗೆ ಆಗುತ್ತದೆ. ದ್ವಂದ್ವದಿಂದ ಪಠ್ಯವನ್ನು ವಿಮುಕ್ತಿಗೊಳಿಸಿದಂತೆ ಆಗುತ್ತದೆ. ಫ್ರಾಯ್ಡ್ ಎರಡು ಪಠ್ಯಗಳ ಕುರಿತು ಹೇಳಿರುವುದು ಇಲ್ಲಿ ಉಲ್ಲೇಖನೀಯವಾಗಿದೆ. ಮನಸ್ಸಿನಲ್ಲಿ ಸುಪ್ತವಾಗಿರುವುದು ಒಂದಾದರೆ ಅಭಿವ್ಯಕ್ತಿಗೊಂಡಿರುವುದು ಮತ್ತೊಂದು. ಬರವಣಿಗೆಯು ಒಂದು ರೀತಿಯಲ್ಲಿ ಮನಸ್ಸಿನಲ್ಲಿ ಇದ್ದುದನ್ನು ಪೂರ್ತಿಯಾಗಿ ಹೇಳುವುದಿಲ್ಲ, ಆದರೆ ಫ್ರಾಯ್ಡ್‌ನು ಇದನ್ನು ಸರಳ ದ್ವಂದ್ವದಲ್ಲಿ ಕಂಡಿಲ್ಲವೆನ್ನುವುದು ಗಮನಾರ್ಹವಾಗಿದೆ.

ಕ್ರಿಸ್ಟೋಫರ್ ನಾರಿಸ್ ಉಲ್ಲೇಖಿಸಿದ ಪ್ರಕರಣವೊಂದನ್ನು ಇಲ್ಲಿ ಪ್ರಸ್ತಾವಿಸಿ ಮುಗಿಸಬಹುದು. ಸಂದರ್ಶನವೊಂದರಲ್ಲಿ ಡೆರಿಡಾಗೆ ಕೇಳಲಾಯಿತು: 'ನೀವು ಈ ಎಲ್ಲಾ ತತ್ತ್ವಜ್ಞಾನಕ್ಕಿಂತ ಹೊರತಾದವರೆ?' ಅದಕ್ಕೆ ಡೆರಿಡಾನ ಉತ್ತರ ನಾನು ತುಂಬಾ ಶಿಸ್ತುಬದ್ಧವಾಗಿ ಈ ಪ್ರಯತ್ನ ಮಾಡುತ್ತಿದ್ದೇನೆ. ಅದೆಂದರೆ ಅಪ್ರಾದೇಶಿಕ, ಅತಾತ್ವಿಕಗೊಳಿಸುವುದೇ ನನ್ನ ಮುಖ್ಯ ಆಸಕ್ತಿ. ಈ ತನಕದ ತತ್ತ್ವಜ್ಞಾನಕ್ಕಿಂತ ಭಿನ್ನವಾಗಿರಲು ಯತ್ನಿಸುತ್ತಿದ್ದೇನೆ. ಒಟ್ಟಿನಲ್ಲಿ ನಿರಚನ ಸಿದ್ಧಾಂತವು ಪಠ್ಯವನ್ನು ಮಿತಿಯಿಂದ ಮುಕ್ತಗೊಳಿಸುತ್ತದೆ.

1. ನೀಶೆಯ ತತ್ತ್ವಜ್ಞಾನದ ಪರಿಗ್ರಹಿಕೆಗಳಲ್ಲಿ ಇದು ಕೂಡಾ ಪ್ರಮುಖವಾದುದು. 'ಪ್ರಭುತ್ವ'' ಎನ್ನುವುದು ಎಲ್ಲವನ್ನೂ ಬದಲಾಯಿಸುತ್ತದೆ. ಇಡಿಯ ಜಗತ್ತೇ ಅಧಿಕಾರದ ಆಮಿಷದ ಹಿಂದಿರುತ್ತದೆ. ಅದಕ್ಕಿಂತ ಹೊರತಾದುದು ಯಾವುದೂ ಇಲ್ಲ 'ಬಲ' ಕ್ಕಿಂತ ಅಧಿಕಾರವು ಹೆಚ್ಚು ಸಂಕೀರ್ಣವಾದುದಾಗಿರುತ್ತದೆ.

ವಿವರಗಳಿಗೆ ನೋಡಿ: Riehard Schaet 1941 Nietzsche Routledge Keganpaul/ London.

**ಅಡಿಟಿಪ್ಪಣಿಗಳು :**

2. 'ಇರುವುದು' ಮತ್ತು 'ಆಗುವಿಕೆ' ಯ ಕುರಿತು ನೀಶೆ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಸ್ತಾವಿಸುತ್ತಾನೆ. 'ಆಗುವಿಕೆ ಒಬ್ಬ ಕಲಾವಿದನ ಜೀವನ ಕ್ರಮವನ್ನು ಸೂಚಿಸುತ್ತದೆ. ನೀಶೆಯು ಹೇಳುವಂತೆ ಜೀವನವು ಕೇವಲ ಉಸಿರಾಟವಲ್ಲ. ಅದರಲ್ಲಿ ಆಗುವಿಕೆಯ ಪ್ರಕ್ರಿಯೆ ಇರುತ್ತದೆ. 'ಆಗುವಿಕೆ'ಗಿಂತ ಹೊರತಾದ ಜೀವನವಿಲ್ಲ. 'ಆಗುವಿಕೆ'ಯೆನ್ನುವುದು ನಮ್ಮ ಭವಿಷ್ಯದ ಅಧಿಕಾರದ ಕುರಿತ ಚಿಂತನೆ ಕೂಡಾ ಹೌದು.

ವಿವರಗಳಿಗೆ ನೋಡಿ : Martin Heiedegger 1979 Nietzehe Routledge and Keganpaul London.

3. ನಿರಚನ ಸಿದ್ಧಾಂತದಲ್ಲಿ 'ಅಂತರ ' ಎನ್ನುವುದು ಮುಖ್ಯ ಪರಿಭಾಷೆಯಾಗಿ ಬಳಕೆಗೊಂಡಿದೆ. ಡೆರಿಡಾ ಹೇಳುವ 'difference' ನೀಶೆ, ಫ್ರಾಯ್ಡ್ ಮತ್ತು ಹೈಡೆಗಾರ್‌ನಿಂದ ಬಂದಿದೆ.

# ಅಧ್ಯಾಯ-5

# ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ನಿರಚನ ಸಿದ್ಧಾಂತ

ಮಾರ್ಕ್ಸ್‌ವಾದಿ ಸಾಹಿತ್ಯ ಸಿದ್ಧಾಂತವು ದ್ವಂದ್ವಾತ್ಮಕ ಮತ್ತು ಘರ್ಷಣೆಯ ಪರಿಕಲ್ಪನೆಗಳನ್ನು ನಮ್ಮ ಮುಂದಿಡುತ್ತದೆ. ಈ ರೀತಿಯ ದ್ವಂದ್ವಾತ್ಮಕವಾದ ಪರಿಭಾಷೆಯನ್ನು ಅರ್ಥ ಮಾಡಿಕೊಳ್ಳದೆ ಹೋದರೆ ನಾವು ಮಾರ್ಕ್ಸ್‌ವಾದಿ ಸಿದ್ಧಾಂತವನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಮಾರ್ಕ್ಸ್‌ವಾದಿ ದೃಷ್ಟಿಕೋನದ ಸಾಹಿತ್ಯ ವಿಮರ್ಶೆಯು ದ್ವಂದ್ವಾತ್ಮಕ ಸಂಬಂಧಗಳನ್ನು ನಿರ್ವಚಿಸಿಕೊಂಡಂತೆಯೇ ಅದು ಕೃತಿಯನ್ನು ಓದುವಾಗಲೇ 'ಕೃತಿರಚನೆ' 'ಬರಹಗಾರ' 'ಬರಹಗಾರನ ತಾತ್ವಿಕತೆ' ಮುಂತಾದ ಪರಿಭಾಷೆಗಳನ್ನು ತಂದಿಟ್ಟಿತು. ಹಾಗೆ ನೋಡಿದರೆ ಆ ಸಾಹಿತ್ಯ ವಿಮರ್ಶೆಯು ಒಂದು ಕೃತಿಯನ್ನು ಓದುವುದೆಂದರೆ ಕೃತಿಯ ತಾತ್ವಿಕ ಅನುಸಂಧಾನವೆಂದು ಪರಿಭಾವಿಸಿತು. ಕೃತಿಯ ಗ್ರಹಿಕೆಯೆಂದರೆ ಅದು ಅಂತಿಮವಾಗಿ ಕೃತಿಯ ರಚನೆಯ ಪರಿಶೀಲನೆಯೆಂಬ ನಿರಚನದ ದೃಷ್ಟಿಯಿಂದ ತಪ್ಪಾದ ಗ್ರಹಿಕೆಯಾಗಿದೆ. ಈ ದೃಷ್ಟಿಯಿಂದ ಮಾರ್ಕ್ಸ್ ಮತ್ತು ಲೆನಿನರ ಬರಹಗಳನ್ನು ನೋಡಿ ಡೆರಿಡಾ, 'ಈಗಾಗಲೇ ಪೂರ್ಣಗೊಂಡ ರಚನೆಯೊಂದರ ಉಸಿರಾಟವನ್ನು; ಅದರ ನಾಡಿಬಡಿತವನ್ನು ಗ್ರಹಿಸಲುಯತ್ನಿಸುತ್ತಾರೆ' ಎಂದು ಹೇಳುತ್ತಾನೆ. ಡೆರಿಡಾನ ಪ್ರಕಾರ ಕೃತಿಯೊಂದಕ್ಕೆ ಬಹುತ್ವವಿರುತ್ತದೆ. ಆದರೆ ಮಾರ್ಕ್ಸ್‌ವಾದಿ ಸಿದ್ಧಾಂತವು ಈ ರೀತಿಯ 'ಬಹುತ್ವ'ವನ್ನು ಎತ್ತಿಹಿಡಿಯುವುದಿಲ್ಲ. ಅದು ಹೆಗೆಲ್ ಪ್ರತಿಪಾದಿಸಿದ 'ಆದರ್ಶವಾದಿ' ಪರಂಪರೆಯನ್ನು ನಿರಾಕರಿಸುತ್ತಾ ಒಂದು ರಚನೆಯ ಅಂತರಾಳದಲ್ಲಿ ಬೇರೆ ಬೇರೆ ರೀತಿಯ ಆಶಯಗಳು ಕೆಲಸ ಮಾಡುತ್ತವೆಯೆಂದು ಪ್ರತಿಪಾದಿಸುತ್ತದೆ. ಮಾರ್ಕ್ಸ್‌ವಾದಿ ದೃಷ್ಟಿಕೋನದ ರಚನಾವಾದಿಗಳು ಹೇಳಿರುವ ಕೆಲವು ಮಾತುಗಳನ್ನು ಮೊದಲು ಇಲ್ಲಿ ಗಮನಿಸಬಹುದು. ಈ ಮಾತುಗಳು ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲಿ ರಚನೆಯ ಬಗೆಗಿನ ಕೆಲವು ಅಭಿಪ್ರಾಯವೇ ಹೊರತು ಇದು ಪೂರ್ಣವಾಗಿ ಮಾರ್ಕ್ಸ್‌ವಾದಿ ದೃಷ್ಟಿಕೋನವನ್ನು ಪರಿಚಯಿಸುತ್ತಿಲ್ಲ.

ರಚನಾವಾದಿ ತಾತ್ವಿಕತೆಗೆ ಹೊಸ ಅರ್ಥವನ್ನು ಕೊಟ್ಟ ಅಲ್ಥೂಸರ್ ಒಂದು ಮಾತನ್ನು ಹೀಗೆ ಹೇಳುತ್ತಾನೆ. 'ರಾಜಕೀಯ, ಸಾಮಾಜಿಕ, ಆರ್ಥಿಕ ಸಂಗತಿಗಳು ಮನುಷ್ಯನ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತವೆ. ಇವೆಲ್ಲವೂ ಮನುಷ್ಯನ ಸಮಗ್ರ ಚಿಂತನಾ ಕ್ರಮದ ಮೇಲೆ ಪ್ರಭಾವವನ್ನು ಬೀರುವುದರಿಂದ ಇಡೀ ರಚನೆಯ ಅಧ್ಯಯನವೇ ಒಂದು ರೀತಿಯಿಂದ ವೈಜ್ಞಾನಿಕ ಕ್ರಮವಾಗಿರುತ್ತದೆ. ಉತ್ಪಾದನೆಯಲ್ಲಿ ಉಂಟಾಗುವ ಪರಿವರ್ತನೆಗಳು ಸಾಮಾಜಿಕ ಸಂರಚನೆಗಳು ಬೇರೆ ಬೇರೆ ರೀತಿಯಲ್ಲಿ ಪ್ರಭಾವಿಸುವುದರಿಂದ ರಚನೆಯ ಕ್ರಮದ ಅಧ್ಯಯನವು ಅನೇಕ ಸಂದರ್ಭದಲ್ಲಿ ಅರ್ಥಪೂರ್ಣವಾಗಿರುತ್ತದೆ.'

ಮಾರ್ಕ್ಸ್‌ವಾದದಲ್ಲಿ ಪ್ರಚಲಿತವಿರುವ ಎರಡು ಪರಿಭಾಷೆಗಳನ್ನು ನೋಡಿ: ಒಂದು ಒಳ ರಚನೆ ( Base Structure) ಮತ್ತೊಂದು ಹೊರ ರಚನೆ (Super Structure) ಈ ಎರಡು ಪರಿಭಾಷೆಗಳೂ ಮುಖ್ಯವಾಗಿ 'ರಚನೆ'ಯೆಂಬುದನ್ನು ಪ್ರಸ್ತಾವಿಸುತ್ತವೆ. ರಾಚನಿಕ ಅಧ್ಯಯನವೆಂದರೆ ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲಿ ಸಾಮಾಜಿಕ ಜೀವನದ ಚರ್ಚೆ. ಈ ದೃಷ್ಟಿಯಿಂದ ಮಾರ್ಕ್ಸ್‌ವಾದಿ ಅಧ್ಯಯನವು ಕೇವಲ ವಿವರಣೆ ಅಥವಾ ರಚನೆಯಲ್ಲಿ ಕ್ರಿಯಾತ್ಮಕ ವಿಧಾನಗಳನ್ನು ಮಾತ್ರವೇ ಅವಲಂಬಿಸಿಕೊಂಡಿಲ್ಲ. ಹಾಗೆ ನೋಡಿದರೆ ಸಾಮಾಜಿಕ ಸಂರಚನೆಯೆನ್ನುವುದು ವಾಸ್ತವವನ್ನು ನೇರವಾಗಿ

ಕಣ್ಣಿಗೆ ಕಾಣುವ ರೀತಿಯಲ್ಲಿ ಕಟ್ಟಲಾಗಿರುವ ವಿಧಾನವಲ್ಲ. ರಚನೆಗಳು ನೇರವಾಗಿ ದೃಶ್ಯಾತ್ಮಕವಾಗಿ ಗೋಚರವಾಗದೆಯೂ ಇರಬಹುದು. ವಾಸ್ತವವೆನ್ನುವುದು ಕೆಲವು ಸಂದರ್ಭಗಳಲ್ಲಿ ನಮ್ಮ ಕಣ್ಣಿಗೆ ಕಾಣದೆ, ಸುಪ್ತವಾಗಿ ವರ್ತಿಸುತ್ತಿರಬಹುದು, ಆ ಕಾರಣಕ್ಕೆ ವಾಸ್ತವವೇ ಇಲ್ಲವೆಂಬ ಅರ್ಥವಲ್ಲಿ ಅದು; ಅದರಾಚೆಗಿನ ಕೆಲವು ಕ್ರಿಯಾತ್ಮಕ ವಿಧಾನಗಳನ್ನು ಇಟ್ಟುಕೊಂಡಿರುತ್ತದೆ. ವಾಸ್ತವವೆನ್ನುವುದಕ್ಕೆ ಅನೇಕ ಆಂತರಿಕ ತರ್ಕಗಳಿರುತ್ತದೆ. ಅದರ ಅನೇಕ ಆಂತರಿಕ ತರ್ಕಗಳೇ ಒಂದು ರೀತಿಯಲ್ಲಿ ಸಾಮಾಜಿಕ ರಚನೆಗಳನ್ನು ನಿರ್ಧರಿಸುತ್ತದೆ. ಉತ್ಪಾದನೆಯ ವಿಧಿ ವಿಧಾನಗಳನ್ನು ಕೂಡಾ ಮಾರ್ಕ್ಸ್‌ವಾದಿ ಅಧ್ಯಯನವು ರಾಚನಿಕ ವಿಧಾನಗಳ ಮೂಲಕ ಚರ್ಚಿಸುತ್ತದೆ.

'ಸಾಮಾಜಿಕ ರಚನೆಯೇ ಮನುಷ್ಯನ ವರ್ತನೆಗಳನ್ನು ನಿರ್ಧರಿಸುತ್ತವೆಯೆಂದು ನಾವು ಭಾವಿಸುವಾಗಲೂ, ಅದು ಅದರಷ್ಟಕ್ಕೆ ಸ್ವಯಂಸಂಪೂರ್ಣವಲ್ಲ. ಈ ದೃಷ್ಟಿಯಿಂದ ಸಾಮಾಜಿಕ ಸಂರಚನೆಯು ಮನುಷ್ಯನ ವಿಕಾಸಶೀಲತೆಯ ಜೊತೆಗೆ ಪರಿವರ್ತನೆಗೆ ಗುರಿಯಾಗುತ್ತದೆ' ಎಂದು ಗೋಲ್ಡ್ ಮನ್ ಹೇಳಿರುವುದು ಗಮನಾರ್ಹ. ಹೀಗೆ ಹೇಳುವಾಗ ಮಾರ್ಕ್ಸ್‌ವಾದವು ರಚನೆಯ ಬಗ್ಗೆ ಕೊಡುವ ಒತ್ತು ಯಾವುದರ ಕಡೆಗಿದೆ ಎನ್ನುವ ಅರಿವು ನಮಗುಂಟಾಗುತ್ತದೆ. ಈ ಮಾತುಗಳು ರಚನೆಯು ಅಭ್ಯಾಸವನ್ನು ಪೂರ್ಣಗೊಂಡ ರೂಪವೆಂದು ಪರಿಭಾವಿಸುತ್ತದೆ. ನಿರಚನವು ಈ ರೀತಿಯ ನಿಲುವನ್ನೇ ಪ್ರಶ್ನಿಸುತ್ತದೆ.

ಮಾರ್ಕ್ಸ್‌ವಾದಿ ಸಿದ್ಧಾಂತವು 'ದ್ವಂದ್ವ'ದ ಪರಿಭಾಷೆಯನ್ನು ತನ್ನ ಮೂಲದ್ರವ್ಯವಾಗಿಸಿಕೊಳ್ಳುತ್ತದೆ ಡೆರಿಡಾ 'ಭಿನ್ನತೆ'ಯೆಂಬ ಪರಿಭಾಷೆಯನ್ನು ಎತ್ತಿಹಿಡಿಯುತ್ತಾನೆ. ಹಾಗೆಯೇ ಕೃತಿಯ ಅಧ್ಯಯನದ ಸಂದರ್ಭದಲ್ಲಿ ಮಾರ್ಕ್ಸ್‌ವಾದವು ವೈಜ್ಞಾನಿಕತೆಯೆಂಬುದನ್ನು ಎತ್ತಿಹಿಡಿಯುತ್ತದೆ. ಟೆರಿ ಈಗಲ್‌ಟನ್‌ನ 'ಕ್ರಿಟಿಸಿಸಂ ಅಂಡ್ ಐಡಿಯಾಲಜಿ' 'ಲಿಟರರಿ ಥಿಯರಿ ಆನ್- ಇನ್ಟ್ರಡಕ್ಷನ್' ಮುಂತಾದ ಕೃತಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕೃತಿಯನ್ನು ಓದುವುದೆಂದರೆ ಅಂತಿಮವಾಗಿ ಕೃತಿಯೊಂದನ್ನು ವೈಜ್ಞಾನಿಕವಾಗಿ ಪರಿಶೀಲಿಸುವುದು ಎನ್ನುವ ಗ್ರಹಿಕೆಗಳನ್ನು ಮಾರ್ಕ್ಸ್‌ವಾದವು ಎತ್ತಿಹಿಡಿಯುತ್ತದೆ. ಒಂದು ಕೃತಿಯನ್ನು ವೈಜ್ಞಾನಿಕವಾಗಿ ಪರಿಶೀಲಿಸುವುದೆಂದರೆ ಏನಿದರ ಅರ್ಥ? ವೈಜ್ಞಾನಿಕ ಪರಿಶೀಲನೆಗೂ ಭಾಷೆಯೂ ಒಂದು ಆಕರವಷ್ಟೆ? ಮಾರ್ಕ್ಸ್‌ವಾದವು ಹೇಳುವ ಪರಿಕಲ್ಪನಾತ್ಮಕ ಅಂಶಗಳಿಗೂ ಭಾಷೆಯೂ ಒಂದು ಆಕರವಾಗಿರುವುದರಿಂದ, ಅದರ ಪರಿಕಲ್ಪನಾತ್ಮಕ ಅಂಶಗಳನ್ನು ಒಂದು ರೂಪಕವಾಗಿ ಗ್ರಹಿಸುತ್ತದೆಯೆಂದು ಡೆರಿಡಾ ವಾದಿಸುತ್ತಾನೆ.

ಮಾರ್ಕ್ಸ್‌ವಾದಿ ಸಿದ್ಧಾಂತವು ಚರಿತ್ರೆ ಮತ್ತು ರಾಜಕಾರಣವನ್ನು ಪರಿಕಲ್ಪನಾತ್ಮಕ ಅಧ್ಯಯನಕ್ಕಾಗಿ ಬಳಸಿಕೊಂಡಿತಷ್ಟೆ? ಈ ರೀತಿಯ ಅಧ್ಯಯನಕ್ಕಾಗಿ ಮಾರ್ಕ್ಸ್‌ವಾದಿ ಸಿದ್ಧಾಂತವು ದ್ವಂದ್ವ ಪರಿಭಾಷೆಯನ್ನು ಬಳಸಿಕೊಂಡಿತು. ಆದರೆ ನಿರಚನ ಸಿದ್ಧಾಂತವು ಈ ರೀತಿಯಲ್ಲಿ ನೋಡುವುದಿಲ್ಲ ಭಿನ್ನತೆಯೇ ಈ ರೀತಿಯ ಅಧ್ಯಯನಕ್ಕೆ ಪೂರಕವಾಗುವ ಪರಿಭಾಷೆಯೆಂದು ನಿರಚನ ಸಿದ್ಧಾಂತವು ಭಾವಿಸಿಕೊಳ್ಳುತ್ತದೆ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯಾದಾಗ (ಉತ್ಪಾದನಾ ಸಂಬಂಧಗಳ ಪರಿವರ್ತನೆ) ರಾಚನಿಕ ಬದಲಾವಣೆಯಾಗುತ್ತದೆ, ಈ ದೃಷ್ಟಿಯಿಂದ ರಾಚನಿಕ ಹಾಗೂ ಕಾವ್ಯ ಸ್ವರೂಪಗಳ ಬಲಾವಣೆಗೂ ಉತ್ಪಾದನಾ ಸಂಬಂಧಗಳ ಪರಿವರ್ತನೆಗೂ ನಿರ್ಣಾಯಕ ಸಂಬಂಧವಿರುತ್ತದೆಯೆಂಬ ವಾದವನ್ನು ನಿರಚನವು ನಿರಾಕರಿಸುತ್ತದೆ.

ಈಗಾಗಲೇ ನೋಡಿರುವಂತೆ ನಿರಚನ ಸಿದ್ಧಾಂತವು ನೀಶೆಯ ತತ್ತ್ವಜ್ಞಾನದ ಬೇರುಗಳನ

ಹೊಂದಿದೆ. ಅದು ತತ್ವಜ್ಞಾನವು ಆಕರ್ಷಕ ಮಾತುಗಳ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿಲ್ಲ. ಆದರೆ ಮಾರ್ಕ್ಸ್‌ವಾದಿ ಸಿದ್ಧಾಂತವು ಪ್ರಬಲವಾದ ವಾದಗಳನ್ನು ಗರ್ಭದಲ್ಲಿರಿಸಿಕೊಂಡು ತನ್ನ ಚರ್ಚೆಯನ್ನು ಮುಂದಿಡುತ್ತದೆ. ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲಿ ರಾಚನಿಕ ವಿಧಾನವೂ ಕೂಡಾ ಅಷ್ಟೇ ಶಕ್ತಿಯುತವಾಗಿದ್ದು, ಅದರಿಂದಲೇ ತಾತ್ವಿಕ ತಳಹದಿಯನ್ನು ಅದು ರೂಪಿಸಿಕೊಂಡಿದೆ.

ಚರಿತ್ರೆಯ ಪರಿಕಲ್ಪನೆಯನ್ನು ನೋಡಿ: ಆ ಪರಿಕಲ್ಪನೆಯೂ ಕೂಡಾ ಮನುಷ್ಯನ ಪ್ರಾತಿನಿಧಿಕರೂಪವೇ ಹೊರತು ಮತ್ತೇನೂ ಅಲ್ಲ. ಚರಿತ್ರೆಯನ್ನು ಕಟ್ಟಲಾಗಿದೆ ಎಂಬ ಮಾತನ್ನು ಕೇಳುತ್ತಿರುತ್ತೇವೆ. ಅದನ್ನು ನಾವು ವ್ಯಾಖ್ಯಾನಿಸುವಾಗಲೂ ನಮಗೆ ಬೇಕಾದಂತೆ; ನಮ್ಮ ಮನಸ್ಸಿನ ಪ್ರಾತಿನಿಧಿಕ ರೂಪಕ್ಕೆ ಅನುಸಾರವಾಗಿ ಕಟ್ಟುತ್ತಿರುತ್ತೇವೆ. ಹೀಗಾಗಿ ಚರಿತ್ರೆಯನ್ನು ನಾವು ಅರ್ಥವಿಸಿಕೊಳ್ಳುವುದೆಂದರೆ ನಾವು ನಮ್ಮ ತರ್ಕಕ್ಕೆ ಅನುಸಾರವಾಗಿ ಅರ್ಥವಿಸಿಕೊಳ್ಳುವುದು ಎಂದೇ ಅರ್ಥ. ಹೀಗೆ ಅರ್ಥವಿಸಿಕೊಳ್ಳುವುದೆಂದರೆ ನಮ್ಮ ಮನಸ್ಸಿನ ತರ್ಕಕ್ಕೆ ಎಷ್ಟು ಲಭ್ಯವಾಗುವುದೋ ಅದನ್ನು ಮಾತ್ರವೇ ಪರಿಭಾವಿಸುವುದು. ಚರಿತ್ರೆಯ ಗ್ರಹಿಕೆಯಲ್ಲಿ ಮಿತಿಯನ್ನುವುದು ರೂಪುಗೊಳ್ಳುವುದು ಕೂಡ ಹೀಗೆಯೆ, ಚರಿತ್ರೆಯನ್ನು 'ಕಟ್ಟು'ವ ಮನಸ್ಸಿಗೆ ಮತ್ತು ಪ್ರಜ್ಞೆಗೂ ಮಿತಿಗಳಿವೆ. ನಿರಚನವು ಭಿನ್ನತೆಯೆಂದು ಕರೆಯುವಾಗ, ಕಟ್ಟಲಾಗಿರುವ ಮತ್ತು ಹೇಳಲಾಗಿರುವ ಚರಿತ್ರೆಯ ಪರಿಕಲ್ಪನೆಯನ್ನು ನಿರಾಕರಿಸುತ್ತದೆ. ಚರಿತ್ರೆಯೆಂಬಂದು ಈಗಾಗಲೇ ನಮ್ಮ ಪ್ರಜ್ಞೆಯನ್ನು ರೂಪಿಸಿದೆಯೆಂಬಂದಾಗಲೀ, ಚರಿತ್ರೆಯೇ ನಮಗೆ ತುಂಬಾ ನಿರ್ದಿಷ್ಟವಾದ ಜ್ಞಾನವನ್ನು ಕೊಟ್ಟಿದೆಯೆಂಬುದನ್ನಾಗಲೀ ನಿರಚನವು ನಿರಾಕರಿಸಿ, ಈ ರೀತಿಯ ಸಂಗತಿಯನ್ನು ನಿರಚನಗೊಳಿಸಬೇಕೆಂದು ಪ್ರತಿಪಾದಿಸುತ್ತದೆ. ಹಾಗೆ ನೊಡಿದರೆ 'ಚರಿತ್ರೆ' ಎಂಬುದು ಕೇವಲ ಆಕರ್ಷಕವಾದ ಪದವಲ್ಲ. ಅದರ ಗ್ರಹಿಕೆಯೆಂದರೆ ಕೇವಲ ಜ್ಞಾನ ಮತ್ತು ಅಧಿಕಾರ: ಎಡ ಮತ್ತು ಬಲ ಅಥವಾ ಪ್ರಗತಿವಿರೋಧಿಗಳು ಮತ್ತು ಪ್ರಗತಿಪರರ ನಡುವೆ ನಡೆಯುವ ಸೆಣಸಾಟವನ್ನು ಗ್ರಹಿಸುವುದೆಂಬ ಅರ್ಥವೂ ಅಲ್ಲ. ಈ ಎರಡು ಸೆಣಸಾಟಗಳಿಂದ 'ಒಂದು ಸಮಗ್ರ ಚರಿತ್ರೆ' ಯು ರೂಪುಗೊಳ್ಳುತ್ತದೆಯೆಂಬುದಕ್ಕೆ ಅರ್ಥವಿಲ್ಲ. ಸತ್ಯ ಮತ್ತು ಚಾರಿತ್ರಿಕ ಚಲನಶೀಲತೆಯು ಈ ರೀತಿಯ ಪದಗಳಿಂದ ರೂಪುಗೊಳ್ಳುವುದೂ ಇಲ್ಲ. ಸರ್ವೋಚ್ಚ ಜ್ಞಾನವೆಂಬುದು; ಸರ್ವೋಚ್ಚ ಅಧಿಕಾರವೆಂಬುದು ಕೇವಲ ಕನಸು. ಜ್ಞಾನಕ್ಕೂ ನಮ್ಮ ಮಾತಿಗೂ ಸಂಬಂಧವಿದೆಯೆ? ಅದೇ ರೀತಿಯಲ್ಲಿ ಸಂಭವಿಸಿದ್ದು ಎನ್ನಲಾದ ಚರಿತ್ರೆಗೂ ನಾವು ಬಳಸುವ ಮಾತಿಗೂ ಸಂಬಂಧವಿದೆಯೆ? ನಾವು ಯಾವುದನ್ನು ದಾಖಲೆ ಸಹಿತವಾಗಿ ಚರಿತ್ರೆಯೆಂದು ಗುರುತಿಸುತ್ತೇವೋ ಅದರಾಚೆಗೂ ಕೆಲವು ರೀತಿಯ ಸತ್ಯಗಳಿರುತ್ತದೆ. ಉದಾಹರಣೆಗೆ , ಅತ್ತಿಮಬ್ಬೆಯು ' ಶಾಂತಿ ಪುರಾಣ ' ಕೃತಿಯನ್ನು ಸಾವಿರ ಪ್ರತಿ ಮಾಡಿಸಿ ಹಂಚಿದಳು ' ಎನ್ನುವ ಮಾತು ಚರಿತ್ರೆಯಲ್ಲಿ ಸಿಗುತ್ತದೆ ಎಂದಿಟ್ಟುಕೊಳ್ಳಿ. ಇದನ್ನು ಒಂದು ಚಾರಿತ್ರಿಕ ಸತ್ಯವೆಂಬಂತೆ ಬಳಸಲಾಗಿದೆ. ಯಾಕಾಗಿ ಅತ್ತಿಮಬ್ಬೆಯು 'ಶಾಂತಿ ಪುರಾಣ ಕೃತಿಯನ್ನು ಸಾವಿರ ಪ್ರತಿ ಮಾಡಿಸಿ ಹಂಚಿದಳು. ಅದರ ಹಿಂದಿನ ಉದ್ದೇಶವೇನು? ಅದನ್ನು ಯಾರು ಓದಿದರು ? ಯಾಕೆ ಓದಿದರು? 'ದಾನ ಚಿಂತಾಮಣಿ'ಯೆನ್ನುವ ಬಿರುದೊಂದು ಅತ್ತಿಮಬ್ಬೆಗೆ ಯಾಕೆ ಬಂತು ? ಈ ತರಹದ ಅನೇಕ ಸಂಗತಿಗಳನ್ನು ನಮ್ಮ ಎದುರಿನ ಚರಿತ್ರೆಯ ಪಠ್ಯಗಳು ಉಲ್ಲೇಖಿಸಬಯಸುವುದಿಲ್ಲ. ಒಂದು ರೀತಿಯಲ್ಲಿ ಕೆಲವನ್ನು ಮುಚ್ಚಿಹಾಕುತ್ತದೆ. ಸತ್ಯವು ಮರೆಯಲ್ಲಿ ಕುಳಿತಿದೆಯೇ?. ಈ ಒಂದು ಚಾರಿತ್ರಿಕ ಪಠ್ಯವನ್ನೇ ತೆಗೆದುಕೊಳ್ಳಿ ಇದಕ್ಕೆ ಕಾರಣ ಇರಬಹುದು ಅಥವಾ ಇಲ್ಲದೆಯೂ ಇರಬಹುದು. ನಮಗೆ ಲಭ್ಯವಾಗುವ ಚಾರಿತ್ರಿಕ ವಿವರವೇ ಅನೇಕಾನೇಕ ಸಂಗತಿಗಳನ್ನು ಒಟ್ಟು ಮಾಡಿ ಒಂದು ಭಿನ್ನರೂಪವನ್ನು ಕೊಡುತ್ತಿರುತ್ತದೆ.

ಅತ್ತಿಮಬ್ಬೆಯ ಕುರಿತು ರನ್ನನು ಹೇಳುವ ಮಾತೊಂದನ್ನು ಉಲ್ಲೇಖಿಸಬಹುದು.

'' ಉತ್ತಮ ಗೋತ್ರೋದ್ಭವೆ, ಸ
ವೃತ್ತೆ, ಮಹಾಸತಿ, ವಿನೇಯ ಚೂಡಾಮಣಿ, ತಾ
ನೆತ್ತೆ ಉಳಿದರೆತ್ತ? ಪಿಕ್ಕುವೊ
ಡತ್ತಿಯ ಪಣ್ ಅತ್ತಿಮಬ್ಬೆ, ಅಲ್ಲದರ ಗುಣಂ'' (ಅಜಿತ ಪುರಾಣ. 111)

**(ಉತ್ತಮ ಕುಲದಲ್ಲಿ ಜನಿಸಿದವಳೂ ಒಳ್ಳೆಯ ನಡತೆಯವಳೂ ಮಹಾಪ್ರತಿವ್ರತೆಯೂ ವಿನಯವಂತರಲ್ಲಿ ಶ್ರೇಷ್ಠಳೂ ಆದ ಅತ್ತಿಮಬ್ಬೆಯಲ್ಲಿ. ಉಳಿದವರೆಲ್ಲಿ? ಆಕೆಯು ಹಿಸುಕಿದರೆ ಅತ್ತಿಯಹಣ್ಣಿನಂತೆ ಮೃದು, ಆದರೆ ಗುಣವು ಮಾತ್ರ ಅದರದಲ್ಲ).**

ಈ ಮಾತುಗಳು ಸಾಹಿತ್ಯ ಕೃತಿಯಲ್ಲಿ ಒಂದು ಚಾರಿತ್ರಿಕ ವಸ್ತುವೆಂಬಂತೆ ದಾಖಲಾಗಿದೆ. ಇದರಲ್ಲಿ ಅತ್ತಿಮಬ್ಬೆಯನ್ನು ಕೊಂಡಾಡಲು ಬಳಸಿರುವ ಪದಗಳನ್ನು ಗಮನಿಸಿ. ಅತ್ತಿಮಬ್ಬೆಯ ಪರಿಚಯವನ್ನು ಕವಿಯು ತನಗೆ ದಕ್ಕಿದಷ್ಟು ವಿವರಗಳ ಮೂಲಕ ದಾಖಲಿಸಿದ್ದಾನೆ. ಆದರೆ ಅತ್ತಿಮಬ್ಬೆಯು ಹೇಗಿದ್ದಳೆಂಬ 'ಪೂರ್ಣ ಸತ್ಯ'ವು ದೊರೆಯುವುದಿಲ್ಲ, ಚರಿತ್ರೆಯೇ ಕಲ್ಪಿತವಾಗಿ ರೂಪುಗೊಳ್ಳುವುದು ಹೀಗೆ. ಅನೇಕಾನೇಕ ರೀತಿಯ ಚಾರಿತ್ರಿಕ ಪ್ರಕ್ರಿಯೆಗಳು ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ರೂಪಿಸಿರಬಹುದು. ಆದರೆ ಅದರ ಬಗ್ಗೆ ನಮಗೆಲ್ಲಿ ವಿವರ ಲಭ್ಯ?. ಅದನ್ನು ಒರಸಿಹಾಕಲಾಗಿದೆ. ಒಂದು ನಿರ್ದಿಷ್ಟ ಸತ್ಯ : ನಿರ್ದಿಷ್ಟ ಜ್ಞಾನ: ನಿರ್ದಿಷ್ಟ ತರ್ಕವೆಂಬುದನ್ನು ಒಡೆಯಬೇಕಾಗಿರುವುದು ಈ ಕಾರಣಕ್ಕೆ.

ಚರಿತ್ರೆಗೂ ಒಂದು ತರ್ಕ, ಒಂದು ನಿಯಮವಿದೆಯೆಂಬ ಪರಿಕಲ್ಪನೆಯನ್ನು ನೋಡಿ: ತರ್ಕ ಮತ್ತು ನಿಯಮವನ್ನು ಯಾರು ಮಾಡಿದರು?. ತರ್ಕವೆಂದು ಯಾವುದನ್ನು ಗುರುತಿಸುತ್ತೇವೋ ಅವೆಲ್ಲವೂ ಒಂದು ವಲಯದೊಳಗೆ ಕೆಲಸ ಮಾಡುತ್ತವೆ. ನಿಯಮಗಳೂ ಕೂಡಾ ಅಷ್ಟೆ.

'ರಸ್ತೆಯ ಫುಟ್‌ಪಾತಿನಲ್ಲಿ ನಡೆಯಬೇಕು' ಎನ್ನುವುದು ಒಂದು ನಿಯಮ. ಈ ನಿಯಮವು ಏನನ್ನು ಸೂಚಿಸುತ್ತದೆ. ರಸ್ತೆಯಲ್ಲಿ ವಾಹನ ಓಡಾಟವು ಸುಲಭವಾಗಲಿ ಎಂಬ ಕಾರಣಕ್ಕೆ ಈ ನಿಯಮವು ರೂಪಿತವಾಗಿದೆ. ರಸ್ತೆ ವಾಹನ: ವಾಹನ ಉಳ್ಳವರು : ಫುಟ್‌ಪಾತಿನಲ್ಲಿ ನಡೆಯುವವರು ಹೀಗೆ ಒಂದು ನಿಯಮವು ಜೊತೆಗೆ ಅನೇಕ ರೀತಿಯ ಸಹನಿಯಮಗಳನ್ನು ತರುತ್ತವೆ. ರಸ್ತೆಯ ಫುಟ್‌ಪಾತಿನ ಮೇಲೆ ನಡೆಯಬೇಕು ಎಂದು ಹೇಳುವಾಗ ಅಲ್ಲಿಒಂದು ನಿಯಮವಿದೆ ಎಂದು ಮಾತ್ರ ತಿಳಿಯುತ್ತೇವೆ. ಮತ್ತು ಆ ನಿಯಮವನ್ನು ಯಾವುದೇ ಕಾರಣಕ್ಕೆ ಪ್ರಶ್ನಿಸಬಾರದು ಎಂದೂ ಭಾವಿಸುತ್ತೇವೆ.

ಹಾಗೆಯೇ ಕಾಗೆಯೊಂದು ತೆಂಗಿನ ಮರದ ಮೇಲೆ ಕೂತಿದ್ದಕ್ಕೆ ತೆಂಗಿನ ಕಾಯಿಬಿದ್ದಿದ್ದಕ್ಕೆ ಸಂಬಂಧ ಕಲ್ಪಿಸಿ ಅದರಾಚೆಗೆ ಏನೂ ಇಲ್ಲವೆಂದು ತರ್ಕವು ಹೇಳಿದರೆ ನಾವದನ್ನು ಒಪ್ಪಿಕೊಳ್ಳುತ್ತೇವೆ. ತರ್ಕದ ಪ್ರಮುಖ ಸಮಸ್ಯೆಯೇ ಇದು. ಅದು ಮನಸ್ಸಿನ ಮೇಲೆ ಕೆಲವನ್ನು ಹೊರಿಸುತ್ತದೆ. ನಾವೂ ಅದರಾಚೆಗೆ ಯೋಚಿಸಲು ಮತ್ತು ಅದರಾಚೆಗಿನ ಸಂಗತಿಗಳನ್ನು ಅಭಿವ್ಯಕ್ತಿಸಲು ಸಾಧ್ಯವಾಗದೇ ಹೋದಾಗ ಒಪ್ಪಿಕೊಳ್ಳುತ್ತೇವೆ. ಈ ಕಾರಣದಿಂದಲೇ ಯಾವುದೇ ಪರಿಕಲ್ಪನೆಗಳು ಅದರಷ್ಟಕ್ಕೆ ಸ್ವಯಂ ಸಂಪೂರ್ಣವೇನಲ್ಲ. ನಮಗಿರುವ ಜ್ಞಾನ; ವಸ್ತು ಅನುಭವಗಳನ್ನು ಪರಸ್ಪರ ಸಂಯೋಜಿಸಿಕೊಂಡು ಅದಕ್ಕೊಂದು ರೂಪವನ್ನು ಕೊಡುತ್ತೇವೆ. ಹೀಗೆ ಮಾಡುತ್ತಿರುವಾಗ ನಾವು ಯಾವುದನ್ನೇ ಆಗಲಿರಿ ಅಂತಿಮವಾಗಿ ಒಂದು ಭಾಷೆಯಲ್ಲಿ ಹೇಳುವಾಗ, ಆಶ್ರಯಿಸುವಾಗ 'ನಮ್ಮ ಮಾತು' ನಾವು ಏನನ್ನು ಹೇಳಬೇಕೆಂದು ಇಷ್ಟ ಪಡುತ್ತೇವೊ ಅದಕ್ಕಿಂತ ಭಿನ್ನತೆಯನ್ನು ಇಟ್ಟು ಕೊಳ್ಳಬಹುದು. ಈ ದೃಷ್ಟಿಯಿಂದ

ನಾವು ಆಶ್ರಯಿಸುವ ಪರಿಕವೂ ಕೂಡಾ ಈ ಅಂತರಗಳ ಸೃಷ್ಟಿಯೇ ಆಗಿವೆ. ಉದಾಹರಣೆಗೆ ಚರಿತ್ರೆಯ ಆಕರವೆಂದು ಶಾಸನಗಳನ್ನು ಆಶ್ರಯಿಸಿದರೆ ಆಯಾ ಶಾಸನಗಳು ಕೂಡಾ ಸತ್ಯದಿಂದ ಬೇರೆಯಾಗಿಯೇ ಇರಬಹುದು. ಮತ್ತು ಶಾಸನಗಳೇ ರೂಪಕಗಳಾಗಬಹುದು. ಮತ್ತು ಶಾಸನಗಳಾಚೆಗೆ 'ಗೊತ್ತಿಲ್ಲದ ಸತ್ಯ' ಗಳಿರಬಹುದು. ಹೀಗಾಗಿ **ಚರಿತ್ರೆಯ ಚಿಂತನೆಯಲ್ಲಿ ಪರಿಪೂರ್ಣವಾದ ಸತ್ಯವೆಂಬುದಿಲ್ಲ. ಚರಿತ್ರೆಯ ಬಗೆಗಿನ ಜ್ಞಾನವೆನ್ನುವುದಕ್ಕೆ ಎರಡು ಅಲಗುಗಳಿವೆ: ಚರಿತ್ರೆಯ ಅರ್ಥ ಮತ್ತು ಅರ್ಥದ ಚರಿತ್ರೆ,** ಅವೆರಡೂ ಪರಸ್ಪರ ಬೆರೆತುಕೊಂಡಿರುತ್ತವೆ. ಹೀಗೆ ಬೆಸೆದುಕೊಂಡಿರುವುದರಿಂದ ನಿರಚನವು ಚರಿತ್ರೆಯ ಸಂದರ್ಭದ ಚರ್ಚೆಯಲ್ಲಿ 'ಮೂಲ' ಮತ್ತು ಅದು ಅಭಿವ್ಯಕ್ತಿಗೊಂಡ 'ರೀತಿ'ಯೆರಡನ್ನೂ ಪರಸ್ಪರ ಬೆಸೆದುಕೊಂಡಿರುವುದನ್ನು ತನ್ನೆದುರು ಇಟ್ಟುಕೊಳ್ಳುತ್ತದೆ. ಆದರ್ಶೀಕೃತವಾದ ಚರಿತ್ರೆಯ ಪರಿಕಲ್ಪನೆಯನ್ನು ನಿರಚನವು ನಿರಾಕರಿಸುವುದು ಕೂಡಾ ಮೇಲಿನ ಕಾರಣಕ್ಕೆ.

ಚರಿತ್ರೆಯೆಂದರೆ ನಡೆದುಹೋದ ಘಟನಾವಳಿಗಳನ್ನು ಸೂಚಿಸುತ್ತಿದೆಯೆಂದು ಹೇಳುತ್ತೇವೆ. ಆದರೆ ನಡೆದುಹೋದ; ಸಂಭವಿಸಿದ ಘಟನೆಗಳು ಎಂದರೆ ಅಲ್ಲಿ ಅರ್ಥಗಳಿರುತ್ತವೆ. ಆ ಘಟನೆಗಳನ್ನು ಯಾರ್ಯಾರು ಹೇಗೆ ಅರ್ಥ ಮಾಡಿಕೊಳ್ಳುತ್ತಾರೋ ಅವರು ಅರ್ಥವಿಸಿಕೊಳ್ಳುವ ರೀತಿಗೆ ಅನುಸಾರವಾಗಿ ಅದರ ವ್ಯಾಖ್ಯಾನ ಶುರುವಾಗುತ್ತದೆ. 'ಇತಿಹಾಸ ಎಂದರೆ ಹಿಂದೆ ಹೀಗೆ ಇತ್ತು' ಎಂದು ಪುರಾತನ ಪುರಾಣ ಕಥೆಗಳನ್ನು ಹೇಳುವ ಗ್ರಂಥ. ರಾಮಾಯಣ ಮತ್ತು ಮಹಾಭಾರತ ನಮ್ಮ ದೇಶದ ಇತಿಹಾಸಗಳು. ಇತಿಹಾಸದಲ್ಲಿ ಪುರಾಣ, ಕಥೆ , ಧರ್ಮ, ಚರಿತ್ರೆ ಮುಂತಾದುವೆಲ್ಲ ಸೇರಿರುತ್ತವೆ' ( ಇಗೋ ಕನ್ನಡ 1997 ಪು 88). ಚರಿತ್ರೆ ಎಂದರೆ ನಡವಳಿಕೆ. ವರ್ತನೆ ; ಒಬ್ಬ ವ್ಯಕ್ತಿಯ ಜೀವನ ಚಿತ್ರ. ಈ ಮೂಲಕ ಸಂಶೋಧನೆ ಮಾಡಿ ರಚಿಸಿದ ದೇಶದ ಕಥೆಯ ಆಧಾರಭೂತವಾದ ಚಿತ್ರ. ಒಂದು ದೇಶದ , ಜನಾಂಗದ ಭೂತಕಾಲದ ಘಟನೆಗಳ ವ್ಯವಸ್ಥಿತವಾದ ನಿರೂಪಣೆ ; ಪ್ರಮುಖವಾದ ಎಲ್ಲ ಘಟನೆಗಳ ನಿರೂಪಣೆಯನ್ನು ಹೊಂದಿರುವ ಗ್ರಂಥ ( ಅದೇ ಪು . 175) ಇತಿಹಾಸ ಅಥವಾ ಚರಿತ್ರೆಯೆನ್ನುವುದು ಈ ಕಾರಣದಿಂದ ಕತೆಯೋ ನಿರೂಪಣೆಯೋ ಆಗಿ ರೂಪುಗೊಂಡಿದೆ. ಈ ನಿರೂಪಣೆಯು ಆಧಾರ ಸಹಿತವಾಗಿರುತ್ತದೆಯೆಂದರೂ, ಈ ಆಧಾರಗಳು ಸ್ವಾಯತ್ತ ಘಟಕಗಳು ಆಗಿರುವುದಿಲ್ಲ. ಸಾಮಾಜಿಕ ಅಧ್ಯಯನವೆಂಬ ಹೆಸರಿನಲ್ಲಿ ಬರುವ ಚಾರಿತ್ರಿಕ ನಿರೂಪಣೆಗಳು ಕೂಡಾ ಭಿನ್ನ ಭಿನ್ನ ಸ್ವರಗಳನ್ನು ಒಳಗೊಂಡಿರುತ್ತವೆ. ಮತ್ತು ಸಮಗ್ರ ಚರಿತ್ರೆಯೆಂಬ ಕಲ್ಪನೆಯೂ ಕೂಡಾ ವೈಯಕ್ತಿಕ ಮತ್ತು ವಿವರಣಾತ್ಮಕ ಅಂಶಗಳನ್ನು ಬಳಸಿಕೊಂಡೇ ರೂಪುಗೊಂಡಿರುತ್ತದೆ. ಈ ರೀತಿಯ ವೈಯಕ್ತಿಕ ಮತ್ತು ವಿವರಣಾತ್ಮಕ ಅಂಶಗಳನ್ನು ಒಳಗೊಂಡಿರುವುದರಿಂದ 'ಒರಸಿ' ಹಾಕಲಾಗಿರುವ ಚರಿತ್ರೆಯೂ ಕೂಡಾ ಇರುತ್ತವೆ.

ಮಾರ್ಕ್ಸ್‌ವಾದಿಗಳು ಪ್ರಸ್ತಾಪಿಸಿದ ಮತ್ತೊಂದು ಪರಿಭಾಷೆ - ರೂಪ ಮತ್ತು ವಸ್ತು. 'ಒಂದು ಸಾಹಿತ್ಯ ಕೃತಿಯು ಒಳಗೊಳ್ಳುವ ವಸ್ತುವೇ ಆ ಕೃತಿಯ ರೂಪವನ್ನು ನಿರ್ಧರಿಸುತ್ತದೆ'. ಎಂದು ಮಾರ್ಕ್ಸ್‌ವಾದಿ ದೃಷ್ಟಿಕೋನದ ವಿಮರ್ಶಕರು ಪ್ರತಿ ಪಾದಿಸಿದರು. ಈ ದೃಷ್ಟಿಯಿಂದ ' ಅಮೃತ ಮತ್ತು ಗರುಡ' ಸಂಕಲನದಲ್ಲಿ ಡಿ. ಆರ್. ನಾಗರಾಜರು ಹೇಳುವ ಅಂಶವೊಂದನ್ನು ಇಲ್ಲಿ ಉಲ್ಲೇಖಿಸಬಹುದು: "ಇಲ್ಲಿ ಚರ್ಚೆ ಪ್ರಾರಂಭವಾಗುವುದೇ ಆಕೃತಿ, ವಸ್ತು, ತಾತ್ತ್ವಿಕ ನಿಲುವುಗಳ ನಡುವಿನ ಅಂತರ್ ಸಂಬಂಧಗಳ ಚರ್ಚೆಯಿಂದ. ಅಂತಿಮವಾಗಿ ಸಾಹಿತ್ಯ ವಿಮರ್ಶೆಯೊಂದರ ಮೂಲಭೂತ ಸಾಮಾಗ್ರಿ ಇದೇ ಎಂದರೂ ಸಲ್ಲುತ್ತದೆ. ಇಲ್ಲಿ ವಸ್ತು ಮತ್ತು ತಾತ್ತ್ವಿಕ ನಿಲುವುಗಳ ಸಂಬಂಧ ಮಾತ್ರ ತೀರಾ ಸೂಕ್ಷ್ಮವಾದದ್ದು, ವಸ್ತುವಿಗೆ ತನ್ನದೇ ಆದ ಸ್ವಂತ ಅಸ್ತಿತ್ವವೊಂದು ಇದೆಯಾದರೂ ಅದು ನಿರ್ದಿಷ್ಟ ಕೃತಿಯೊಂದರಲ್ಲಿ ರೂಪು ತಳೆಯುವುದು ತಾತ್ತ್ವಿಕ ನಿಲುವಿನ ಜೊತೆಗೆ ಉಂಟಾಗುವ ಅಂತರ್

ಪ್ರಕ್ರಿಯೆಗಳಿಂದ. ವಾಸ್ತವವಾಗಿ, ಈ ಅಂತರ್ ಪ್ರಕ್ರಿಯೆಗಳ ಸ್ವರೂಪವೇ ಆ ರಚನೆಯ ಆ ಕೃತಿಯನ್ನು ನಿರ್ಧರಿಸುತ್ತದೆ' ಈ ಮಾತುಗಳಲ್ಲಿ ಡಿ. ಆರ್. ನಾಗರಾಜರು ಪ್ರಸ್ತುತಪಡಿಸುವುದು ವಸ್ತು ಮತ್ತು ಆಕೃತಿಯ ನಡುವಣ ದ್ವಂದ್ವವನ್ನು 'ಅಂತರ್ ಪ್ರಕ್ರಿಯೆ' 'ವಸ್ತುವಿಗೆ ಇರುವ ಸ್ವಂತ ಅಸ್ತಿತ್ವ' ಈ ರೀತಿಯ ಮಾತುಗಳು ಕೆಲವು ರೀತಿಯ ಒತ್ತಾಯಗಳನ್ನು ಹೇರುತ್ತದೆ. ವಸ್ತು ಮತ್ತು ಆಕೃತಿಯೆನ್ನುವುದನ್ನು ಚಾರಿತ್ರಿಕವಾಗಿ ಗ್ರಹಿಸಬೇಕೆ ? ಇದು ಪ್ರಶ್ನೆ. ಸಾಹಿತ್ಯ ಕೃತಿಯೊಂದರಲ್ಲಿ 'ಓದು' ಎನ್ನುವುದು ಮುಕ್ತ. ಸ್ವತಂತ್ರವಾದುದನ್ನು ರಚನೆಯಲ್ಲಿಯೇ (ಆಕೃತಿ) ಬಂಧಿಸಬೇಕೆ? ಕೃತಿಯೊಂದನ್ನು ಓದುವುದೆಂದರೆ ಅದು ಆಕೃತಿಯನ್ನು ಗ್ರಹಿಸುವುದೆ ? ವಸ್ತುವನ್ನು ಗ್ರಹಿಸುವುದೆ? ವಸ್ತು ಮತ್ತು ಆಕೃತಿಗೆ ಅಷ್ಟೊಂದು ದೊಡ್ಡ ಜಗಳವಿದೆಯೆ?. ಆ ಎರಡೂ ಪರಿಭಾಷೆಯಲ್ಲಿ 'ಆಕೃತಿ'ಯೇ ಒಂದು ರೀತಿಯಿಂದ ಆಕರ್ಷಕ ಅಂಶವನ್ನು ಒಳಗೊಂಡಿದ್ದು, ಅದಕ್ಕೆ ಮೂಲ ವಸ್ತು ಮತ್ತು ರಚನೆ ( ಆಕೃತಿ)ಗೂ ಸಂಬಂಧಿಸಿದ ನಿರ್ವಚನ ಅಷ್ಟು ಸುಲಭವಲ್ಲ. ಯಾವುದೇ ಸಾಹಿತ್ಯ ಕೃತಿಗಳು ಒಂದು ವಸ್ತುವನ್ನು ಒಂದು ಆಕೃತಿಯ ಒಳಗೆ ಎರಕ ಹೊಯ್ಯುತ್ತದೆಯೆಂಬ ಕಲ್ಪನೆಯು ಒಂದು ರೂಪಕವಷ್ಟೆ? ಭಾಷೆಯೇ ಆಗಲಿ: ವಸ್ತುವೇ ಆಗಲಿ; ರಚನೆಯೇ ಆಗಲಿ ಅದು ಶೂನ್ಯದಿಂದ ಅವತರಿಸುವ ಪ್ರಕ್ರಿಯೆಯಲ್ಲ. ರಚನೆಯ ಚರ್ಚೆಯು ಅಲ್ಲಿಂದ ಶುರುವಾದರೆ ಪರವಾಗಿಲ್ಲ. ಒಂದು ವೇಳೆ ರಚನಾವಾದ 'ಭಾಷೆಯಿಂದಾಚೆಗೆ', 'ವಸ್ತುವಿನಿಂದ ಆಚೆಗೆ,: 'ರಚನೆಯಿಂದಾಚೆಗೆ' ಎನ್ನುವಂಥ ಪರಿಭಾಷೆಯನ್ನು ಇಟ್ಟುಕೊಂಡರೆ ರಚನಾವಾದವು ಈಗಿರುವಂಥ ಸ್ಥಿತಿಯಲ್ಲಂತೂ ಇರಲು ಸಾಧ್ಯವಿಲ್ಲ. ಮಿತಿಯ ಆಚೆಗೆ ಅದು ವರ್ತಿಸಲೇಬೇಕಾಗುತ್ತದೆ.

ಮಾರ್ಕ್ಸ್‌ವಾದ 'ಕೃತಿ ಮತ್ತು ತಾತ್ತ್ವಿಕತೆ'ಯೆಂಬ ಪ್ರಶ್ನೆಯನ್ನು ತನ್ನೆದುರು ಬಹಳ ದೊಡ್ಡದಾಗಿ ಇಟ್ಟುಕೊಂಡಿತಷ್ಟೆ! ಕೃತಿಯಲ್ಲಿ ತಾತ್ತ್ವಿಕತೆಯೆಂದು ಮಾತಾಡಲು ಶುರುಮಾಡಿದರೆ ಕೃತಿಯು ನಮಗೆ ಕೊಟ್ಟ ಭಾಷೆಯನ್ನು ತುಂಬಾ ನಿರ್ದಿಷ್ಟ ಮತ್ತು ಖಚಿತವೆಂದು ಒಪ್ಪಿಕೊಂಡಿಂತಾಗುತ್ತದೆಯೆಂದು ನಿರಚನವು ಪರಿಭಾವಿಸುತ್ತದೆ. ಹೀಗೆ ಮಾಡಿದಾಗ ಕೃತಿಯ ಭಾಷೆಯನ್ನು: ಅದಕ್ಕಿರುವ ಸ್ವಾತಂತ್ರವನ್ನು ಮಾರ್ಕ್ಸ್‌ವಾದ ನಿರಾಕರಿಸುತ್ತದೆ. ಕೃತಿಯ ತಾತ್ತ್ವಿಕತೆಯೆಂಬ ಪರಿಭಾಷೆಯೇ ಕೃತಿಯ ನಿಯಂತ್ರಕಗಳಂತೆ ಕೆಲಸ ಮಾಡುತ್ತದೆಯೆಂದು ನಿರಚನವು ಮಾರ್ಕ್ಸ್‌ವಾದಕ್ಕೆ ಪ್ರತಿಕ್ರಿಯಿಸುವಾಗ ಹೇಳುತ್ತದೆ. ಒಬ್ಬ ಲೇಖಕನ ತಾತ್ತ್ವಿಕತೆಯ ಇದು,: ಕೃತಿಯ ತಾತ್ತ್ವಿಕತೆಯು ಇದು ಎಂದು ಕೃತಿಯೊಂದರ ಅರ್ಥವನ್ನು ಬಿಗಿಹಿಡಿಯುವ ಮಾರ್ಕ್ಸ್‌ವಾದದ ಪರಿಭಾಷೆಯ ಬಗ್ಗೆ ನಿರಚನದ ಅಸಹನೆಯಿದೆ.

ಕೃತಿಯ ತಾತ್ತ್ವಿಕತೆ: ಕೃತಿಯ ಹೊರಗಿನ ತಾತ್ತ್ವಿಕತೆಯೆಂಬ ಪರಿಭಾಷೆಯನ್ನು ಬಳಸಿಕೊಳ್ಳುವಾಗ ಮಾರ್ಕ್ಸ್‌ವಾದವು ವೈಜ್ಞಾನಿಕ ತಿಳುವಳಿಕೆಯೆನ್ನುವುದನ್ನೂ ಜೊತೆಗೆ ತರುತ್ತದೆಯಷ್ಟೆ?ಜೊತೆಗೆ ಒಂದು ಪಠ್ಯವನ್ನುಗುರುತಿಸುವಾಗಲೂ ಆ ಪಠ್ಯವನ್ನು ವೈಜ್ಞಾನಿಕ ಅಂಶಗಳ ಜೊತೆಗೆ ಹೇಗೆ ಪರಿಭಾವಿಸಬಹುದು ಎಂದು ತಿಳಿಯ ಹೇಳುತ್ತದೆ. ಈ ರೀತಿಯ ತಿಳುವಳಿಕೆಯನ್ನುಮಾರ್ಕ್ಸ್‌ವಾದವು ನಮ್ಮೆದುರು ಮಂಡಿಸುವಾಗ ಅದೊಂದು ನಿಯತ್ತಿನ ಪ್ರಶ್ನೆಯೆಂಬಂತೆ ನಮ್ಮ ಮುಂದೆ ಸಾಹಿತ್ಯಿಕ ಪಠ್ಯವನ್ನೇ ಇಡುವುದರಿಂದ ಸಹಜವಾಗಿಯೇ ಕೆಲವು ಸಮಸ್ಯೆಯನ್ನು ಎದುರಿಸುತ್ತದೆಯೆಂದು ನಿರಚನವು ಪರಿಭಾವಿಸುತ್ತದೆ.

ಒಂದು ಕೃತಿ, ಅದರ ಹಿಂದಿರುವ ತಾತ್ತ್ವಿಕತೆ , ಚರಿತ್ರೆ, ಲೇಖಕನ ತಾತ್ತ್ವಿಕತೆ: ಅವುಗಳ ಜೊತೆಗೆ ರಚನೆಯ ಕ್ರಮ ಈ ತರಹ ಅನೇಕ ಸಮ್ಮಿಶ್ರ ಸಂಗತಿಗಳು ಮಾರ್ಕ್ಸ್‌ವಾದಿ ಅಧ್ಯಯನ ಕ್ರಮದಲ್ಲಿ ಹಾಸು ಹೊಕ್ಕಾಗಿರುವುದರಿಂದ ಸಾಹಿತ್ಯದ ಚರ್ಚೆಯು ಈ ಅಂಶಗಳಿಂದ ಪ್ರೇರಣೆಯನ್ನು ಪಡೆದು ಕೊಳ್ಳುತ್ತದೆ. ಜ್ಞಾನ, ಅನುಭವಗಳು ಕಟ್ಟಿಕೊಡುವ ಪ್ರತಿಮೆಗಳಿಗೆ ಒಂದು ನಿರ್ದಿಷ್ಟತೆಯಿದೆ. ಆದರೆ ಅದು ಒಂದು ಪಠ್ಯದ ಮೂಲಕ ನಮ್ಮ ಕಣ್ಣೆದುರು ದಾಖಲಾಗುತ್ತದೆಯೆಂದು ಮಾರ್ಕ್ಸ್‌ವಾದವು

ಪರಿಭಾವಿಸುತ್ತದೆ. ಉದಾಹರಣೆಗೆ: ಬೇಂದ್ರೆಯವರ ಹಕ್ಕಿಹಾರುತಿದೆ ನೋಡಿದಿರಾ ಕವಿತೆಯನ್ನು ಕನ್ನಡದಲ್ಲಿ ಹೇಳಿದ ಅಂಶಗಳ ಹಿನ್ನೆಲೆಯಿಂದ ಒಂದು ರೀತಿಯ ತೀರ್ಮಾನಕ್ಕೆ ವಿಮರ್ಶಕರು ಬಂದಿದ್ದಾರೆ. ಈ ಕವಿತೆಯಲ್ಲಿ ಬರುವ ಹಕ್ಕಿಯು ಸ್ವಾತಂತ್ರ್ಯದ ಸಂಕೇತವಾಗಿದೆ, ಇದನ್ನು ಬ್ರಿಟೀಶ್ ರಾಜಸತ್ತೆಯ ವಿರುದ್ಧ ಬರೆಯಲಾಗಿದೆ ಇತ್ಯಾದಿ. ಚರಿತ್ರೆಯ ಬಗ್ಗೆ ಇರುವ ತಿಳುವಳಿಕೆ ಮತ್ತು ಕವಿತೆಯಲ್ಲಿ ಪ್ರತಿಪಾದಿತವಾಗಿತವಾಗಿರುವ ಹಕ್ಕಿ ಎರಡನ್ನೂ ಜೊತೆ ಜೊತೆಗೆ ತಂದು ಕೃತಿಯ ತಾತ್ತ್ವಿಕತೆಯನ್ನು ಈ ಮೂಲಕ ಗುರುತಿಸುವ ಪದ್ಧತಿಯು ವೈಜ್ಞಾನಿಕ ಕ್ರಮವೆಂಬಂತೆ ಭಾಸವಾಗುತ್ತದೆ. ಆದರೆ ಈ ರೀತಿ ಮಾಡುವ ಮೂಲಕ ಕವಿತೆಗೂ ಅವರ ಆಲೋಚನೆಗೂ, ವಸಾಹತು ಚರಿತ್ರೆಗೂ ಬೇಂದ್ರೆಯವರಿಗೂ ಕೆಲವು ರೇಖೆಗಳನ್ನು ಎಳೆಯುತ್ತವೆ. ನಿರಚನವು ಈ ರೀತಿಯ ಕಣ್ಣೆದುರು ಕಟ್ಟಲಾಗಿರುವ ಪ್ರತಿಮೆಯನ್ನು ಗ್ರಹಿಸಿ ಬೇಂದ್ರೆಯ ತಾತ್ತ್ವಿಕತೆ ಎಂದು ಹೇಳುವುದು ಸರಿಯೆ? ಎಂದು ಕೇಳುತ್ತದೆ.

ಚರಿತ್ರೆಗೂ ಮನುಷ್ಯನಿಗೂ ನಿರ್ಣಾಯಕವಾದ ಸಂಬಂಧವಿದೆಯೆಂದು ಪರಿಭಾವಿಸುವ ಮಾರ್ಕ್ಸ್‌ವಾದದ ನಿಲುವು ಬರವಣಿಗೆ ಮತ್ತು ಮನುಷ್ಯನ ಅನುಭವಗಳನ್ನು ಒಂದು ವರ್ತುಲದ ಒಳಗೆ ತರುತ್ತದೆ. ಹೀಗೆ ತರುವುದರ ಮೂಲಕ ಅಲ್ಲೊಂದು ಸಹಯೋಗವಿದೆಯೆಂದು ಮಾರ್ಕ್ಸ್‌ವಾದವು ತಿಳಿಯುತ್ತದೆ. ಇದರ ಪರಿಣಾಮವೆಂದರೆ 'ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ಸಾಹಿತ್ಯ ಪಠ್ಯ' ಇವುಗಳ ದ್ವಂದ್ವಾತ್ಮಕ ಸಂಬಂಧವೆನ್ನುವುದು ಇಲ್ಲಿ ಮುಖ್ಯ. ಈ ರೀತಿಯ ನಿಲುವು ಒಂದು ತರ್ಕವನ್ನು ರೂಪಿಸುವುದರ ಜೊತೆಗೆ ಮುಕ್ತಾಯವಾಗುತ್ತದೆ. ನಿರಚನದಲ್ಲಿ ಈ ರೀತಿಯ ತರ್ಕಗಳೇ ಪ್ರಶ್ನಾರ್ಹ.

ಚರಿತ್ರೆಯೆಂದರೆ ಈಗಾಗಲೇ ಸಿದ್ಧವಾಗಿರುವುದೆಂದೂ ಅದು ನಮ್ಮ ಮನಸ್ಸುಗಳ ಮೇಲೆ ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆಯೆಂದೂ ಮಾರ್ಕ್ಸ್‌ವಾದವು ನಂಬುತ್ತದೆ. ಇದು ಕೃತಿಯ ಓದಿನಲ್ಲಿಯೂ 'ನಿರ್ಣಯ'ಗಳನ್ನು ಹೇಳುತ್ತದೆ. ಓದಿನಲ್ಲಿಯೇ 'ಬಹು ಆಯ್ಕೆ'ಯೆಂಬ ಪ್ರಶ್ನೆಯೇ ಅದಕ್ಕಿಲ್ಲ. ಭಾಷೆ ಮತ್ತು ಅರ್ಥವೆನ್ನುವುದನ್ನು ಮಾರ್ಕ್ಸ್‌ವಾದಿ ವಿಮರ್ಶೆಯು ನಿರ್ದಿಷ್ಟವಾದ ವೈಚಾರಿಕ ಚೌಕಟ್ಟಿನಲ್ಲಿಯೇ ಪರಿಭಾವಿಸುತ್ತದೆ.

ಮಾರ್ಕ್ಸ್‌ವಾದಿ ವಿಮರ್ಶೆಯು ವಾಸ್ತವಕ್ಕೂ, ಕೃತಿಗೂ ಸಂಬಂಧವಿದೆಯೆಂದು ಒತ್ತಿ ಹೇಳುತ್ತದೆ. ಪ್ರತಿಯೊಂದು ಚಾರಿತ್ರಿಕ ವಾಸ್ತವವೂ ಒಂದು ಕೃತಿಯನ್ನು ಕಟ್ಟಿಕೊಡುತ್ತದೆಯೆಂದು ಪ್ರತಿಪಾದಿಸುತ್ತದೆ. ಹೀಗೆ ಪ್ರತಿಪಾದಿಸುವಾಗ ಪ್ರತಿಯೊಂದು ಸಾಹಿತ್ಯ ಕೃತಿಯಲ್ಲಿ ತನ್ನದೇ ಆದ ಅಭಿವ್ಯಕ್ತಿಕ್ರಮವನ್ನು ರೂಢಿಸಿಕೊಳ್ಳುತ್ತದೆಯೆಂಬ ಮಾರ್ಕ್ಸ್‌ವಾದದ ನಿಲುವು - ಕೃತಿಯೊಂದು ಕೊಡುವ ಸೂಚನೆಗಳನ್ನು ಖಚಿತ ಪಡಿಸಿಕೊಳ್ಳುತ್ತದೆ. ಈ ರೀತಿಯ ಖಚಿತ ಮತ್ತು ಬದ್ಧ ತೀರ್ಮಾನಗಳೇ 'ಮುಕ್ತ ಓದ'ನ್ನು ನಿಯಂತ್ರಿಸುತ್ತದೆ.

**ಯಾವುದೇ ರೀತಿಯಲ್ಲಿ 'ಅರ್ಥಹಿಂಸೆ'ಯನ್ನು ಬಯಸದೇ: ತಾರ್ಕಿಕ ಆಕರ್ಷಣೆಗೆ ಬಲಿಯಾಗದೇ ಓದುವುದೇ ನಿರಚನ ಸಿದ್ಧಾಂತದ ಗುರಿ.** ಈ ದೃಷ್ಟಿಯಿಂದ ಇದು ಮಾರ್ಕ್ಸ್‌ವಾದದ ಪ್ರಬಲವಾದ ನಿಲುವುಗಳನ್ನು ವಿರೋಧಿಸುತ್ತದೆ.

## ಅಧ್ಯಾಯ-6

# ಸಂಸ್ಕೃತಿಯ ಪ್ರಶ್ನೆ ಮತ್ತು ನಿರಚನ ಸಿದ್ಧಾಂತ

ಸಾಹಿತ್ಯ ವಿಮರ್ಶೆಯಲ್ಲಿ ಆಗಾಗ ಸಂಸ್ಕೃತಿಯ ಪ್ರಶ್ನೆಯು ಚರ್ಚೆಗೆ ಬರುವುವದು ವಾಡಿಕೆ. ಸಂಸ್ಕೃತಿಯು ಕೃತಿಯ ಹೊರಗಿನ ಪ್ರಶ್ನೆಯಾಗಿದ್ದರೂ ಅದನ್ನು ಕೃತಿಯ ಮುಖೇನ ಗ್ರಹಿಸಬೇಕೆ? ಸಂಸ್ಕೃತಿಯು ಹೊರಗಿನ ಒಳಗಿನ ಪ್ರಶ್ನೆಯೆ? ಕೃತಿಯ ಒಳಗಿನ ಪ್ರಶ್ನೆಯಾಗಿ ಇಟ್ಟು ಕೊಂಡಾಗ ಕೃತಿಯನ್ನು ಹೇಗೆ ಗ್ರಹಿಸಬೇಕು ? ಈ ರೀತಿಯ ಪ್ರಶ್ನೆಗಳನ್ನು ಸಾಹಿತ್ಯ ವಿಮರ್ಶೆಯು ಎದುರಿಸುತ್ತಲೇ ಬಂದಿದೆ. ಅಷ್ಟೇ ಅಲ್ಲ ಸಂಸ್ಕೃತಿ ನಿಷ್ಠ ವಿಮರ್ಶೆಯೆಂಬ ಪ್ರತ್ಯೇಕ ಕವಲು ಕೂಡಾ ಚಾಲ್ತಿಯಲ್ಲಿದೆ, ಸುಲಭ ಉಪಾಯವಾಗಿ; ಆಕರ್ಷಕವಾದ ಮಾತಿನ ಬಲೆಯಲ್ಲಿ ಸಂಸ್ಕೃತಿಯೆಂಬ ಪದವನ್ನು ವಿಮರ್ಶಕರು ತಂದಿಟ್ಟು ಕೃತಿಯನ್ನು ಚರ್ಚಿಸುವ ಕ್ರಮದಿಂದ ಶುರುಮಾಡಿ, ಸಂಸ್ಕೃತಿಯೆಂಬ ಪದವನ್ನೇ ಒಂದು ತಾತ್ತ್ವಿಕ ಪರಿಕರವಾಗಿ ಬಳಸಿಕೊಂಡ ವಿಧಾನಗಳು ಕನ್ನಡ ವಿಮರ್ಶೆಯಲ್ಲಿ ಹೇರಳವಾಗಿ ಸಿಗುತ್ತದೆ. 'ಕೃತಿ ಸಂಸ್ಕೃತಿ' 'ಪುಸ್ತಕ ಸಂಸ್ಕೃತಿ' 'ಕಲಿಕೆಯ ಸಂಸ್ಕೃತಿ' 'ಪ್ರತಿ ಸಂಸ್ಕೃತಿ' ಹೀಗೆ ಅನೇಕ ಪದಗಳು ಕನ್ನಡದಲ್ಲಿ ಚಾಲ್ತಿಯಲ್ಲಿವೆ. ಇದರಿಂದಾಗಿ ಸಂಸ್ಕೃತಿಯ ಕುರಿತ ಚಿಂತನಾ ಕ್ರಮವು ಕನ್ನಡದಲ್ಲಿ ಚಾಲ್ತಿಯಲ್ಲಿರುವುದು ಮಾತ್ರವೇ ಅಲ್ಲ; ಈ ಪದ ವಿಮರ್ಶೆಯ ಚರ್ಚೆಯಲ್ಲಿ ಅನಿವಾರ್ಯ ಎಂಬಂಥ ವಾತಾವರಣವು ರೂಪುಗೊಂಡಿದೆ. ಈ ದೃಷ್ಟಿಯಿಂದ ಸಂಸ್ಕೃತಿಯ ಕುರಿತು ನಿರಚನ ಸಿದ್ಧಾಂತವು ಪ್ರತಿಪಾದಿಸುವ ನಿಲುವುಗಳನ್ನು ನೋಡುವುದು ಇಲ್ಲಿ ಅವಶ್ಯ.

'ಕೃತಿ ಸಂಸ್ಕೃತಿ' ಪುಸ್ತಕ ಸಂಸ್ಕೃತಿ ' ಪ್ರತಿ ಸಂಸ್ಕೃತಿ' ಯೆನ್ನುವಂಥ ಪದಗಳನ್ನು ವಿಮರ್ಶಕರು ಜಾರಿಗೆ ತರುವಾಗ ಸಾಂಸ್ಕೃತಿಕ ಚಟುವಟಿಕೆಯ ಭಾಗವಾಗಿ ಈ ರೀತಿಯ ಮಾತುಗಳು ಬಳಕೆಗೆ ಬರುತ್ತಿರುತ್ತವೆ. ವಿಮರ್ಶಕರ ತಾತ್ತ್ವಿಕ ಗ್ರಹಿಕೆ ಮತ್ತು ನಿರ್ದಿಷ್ಟ ಜ್ಞಾನದ ಮಾದರಿಗಳನ್ನು ಇವು ಸೂಚಿಸುತ್ತವೆ. ಈಗಾಗಲೇ ಒಂದು ಸಂಸ್ಕೃತಿಯ ಪರಿಕಲ್ಪನೆಯಿದೆ, ಅದಕ್ಕಿಂತ ಬೇರೆಯಾದ ಭಿನ್ನ ಸಂಸ್ಕೃತಿಯ ಕುರಿತ ಚರ್ಚೆಯು ಸಾಧ್ಯವೆಂಬುದನ್ನು ಪ್ರತಿ ಸಂಸ್ಕೃತಿಯ ಪರಿಕಲ್ಪನೆಯು ನಮ್ಮ ಮುಂದೆ ಇಡುತ್ತದೆ . ಈ ಕುರಿತು ಬರೆಯುತ್ತಾ ರಹಮತ್ ತರೀಕೆರೆಯವರು ಹೇಳುವ ಮಾತನ್ನು ಇಲ್ಲಿ ಪ್ರಸ್ತಾವಿಸಬಹುದು 'ತಮಗೆ ಕೇಡುಬಯಸುವ ಆಳುವವರ ಸಂಸ್ಕೃತಿಯನ್ನು ಆಳಾಗಿದ್ದ ವರ್ಗಗಳು ವೈಚಾರಿಕವಾಗಿ ವಿಶ್ಲೇಷಿಸುವುದು ಹಾಗೂ ಅದರ ನಾಶ ಸಾಧಿಸುವುದು. ನಾಶವೇಕೆಂದರೆ ಅದು ಅವೈಚಾರಿಕವಾಗಿದೆ ಹಾಗೂ ಅಮಾನವೀಯಾಗಿದೆ. ಆದರೆ ಅರ್ಥಪೂರ್ಣವಾದ ಪ್ರತಿಭಟನೆಯಲ್ಲಿ ನಾಶವೊಂದೇ ಕೆಲಸವಲ್ಲ. ಕೆಟ್ಟಿದ್ದರ ನಾಶದ ನಂತರ ಒಳ್ಳೆಯದೊಂದನ್ನು ಬದಲಿಗೆ ಕಟ್ಟಿಕೊಳ್ಳುವ ಹೊಣೆಯು ಇರಬೇಕು, ಯಾಕೆಂದರೆ ಕೆಡವುವ ಕ್ರಿಯೆಗೆ ಕಟ್ಟುವ ಕನಸಿಲ್ಲದಾಗ ಬೆಲೆಯಿರುವುದಿಲ್ಲ. ಹೀಗೆ ಮತ್ತೆ ಕಟ್ಟುವ ಕ್ರಿಯೆಯೇ 'ಪ್ರತಿ ಸಂಸ್ಕೃತಿ' ಅಸಮಾನತೆಯನ್ನು ಪ್ರತಿಪಾದಿಸುವ ವಿಷಯ ಕಲ್ಪನೆಗಳನ್ನು ಕೆಡಹುವುದು ವರ್ತಮಾನದ ಕ್ರಿಯೆಯಾದರೆ, ಎಲ್ಲರೂ ಸಮಾನವಾಗಿ ಸುಖವಾಗಿ ಬದುಕುವ ಕನಸುಗಳನ್ನು ಕಾಣುವುದು ಮುಂದಿನ ಕ್ರಿಯೆ . ಹೀಗೆ ಪಾವಿತ್ರ್ಯನಾಶವೂ ಪ್ರತಿ ಸಂಸ್ಕೃತಿ ನಿರ್ಮಿತಿಯೂ ಜೋಡಿ ಕಲ್ಪನೆಯಾಗಿದೆ; ಎರಡು ತೊಡಗುವಿಕೆಯೂ ಒಂದು ಗುರಿಯಾಗಿದೆ?(1993 ಪು 1. )

ರಹಮತ್ ತರೀಕೆರೆಯವರ ಪುಸ್ತಕದಿಂದ ತೆಗೆದುಕೊಂಡ ಈ ಮಾತುಗಳು ಅವರ ಸಾಂಸ್ಕೃತಿಕ ಗ್ರಹಿಕೆಯ ಸಾಕ್ಷಿಯಾಗಿದೆ. ಒಂದು ಆಳುವ ವರ್ಗ ಮತ್ತೊಂದು ಆಳಿಸಿಕೊಳ್ಳುವ ವರ್ಗ. ಒಂದನ್ನು

ಕುಟ್ಟಿಕೆಡಹಿ ಮತ್ತೊಂದರ ನಿರ್ಮಾಣವೆಂಬಂಥ ಮಾತುಗಳು ಸಂಸ್ಕೃತಿಯ ಕುರಿತ ಚಿಂತನೆಯ ಒಂದು ಭಾಗವಾಗಿದೆ. ಸಂಸ್ಕೃತಿಯ ಬಗೆಗೆ ಈಗಾಗಲೇ ಒಂದು ಒಗೆಯ ಜ್ಞಾನವು ಲಭ್ಯವಾಗಿದೆ. ಲಭ್ಯವಾಗಿರುವ ಸಾಂಸ್ಕತಿಕ ಪರಿಜ್ಞಾನದಿಂದ ಮತ್ತೊಂದು ಅಧಿಕೃತತೆಯು ಸಾಧ್ಯವಾಗುತ್ತದೆ ಎಂಬಂಥ ನಿಲುವುಗಳು, ಕೆಲವು ಒಳಗುಟ್ಟುಗಳನ್ನು ಅಷ್ಟು ಬೇಗನೆ ಬಿಡಲು ಬರುವುದಿಲ್ಲ. ವಾಸ್ತವವಾಗಿ ಈ ರೀತಿಯ ಚಿಂತನೆಯ ಕ್ರಮಗಳಾಚೆಗೆ ಬೇರೆ ನಿಲುವುಗಳು ಸಾಧ್ಯ, ಈ ಬಗೆಯ ಸರಳ ದ್ವಂದ್ವದ ಸಮೀಕರಣಗಳಾಚೆಗೂ ಕೆಲವು ಸಂಗತಿಗಳಿವೆ.

ಸಂಸ್ಕೃತಿಯು ಬರವಣಿಗೆಯಾಚೆಗಿದೆ, ಅನೇಕ ಸಂದರ್ಭದಲ್ಲಿಯೂ ಉಳಿಯುತ್ತದೆ. ಅಥವಾ ಸಂಸ್ಕೃತಿಯೆನ್ನುವುದು ಬರವಣಿಗೆಯಲ್ಲಿ ಬರುವಾಗ ಅದು ಬರವಣಿಗೆಯ ರೂಪಕ್ಕೆ ಅನುಸಾರವಾಗಿ ವ್ಯಾಖ್ಯಾನಕ್ಕೆ ಆ ಗುರಿಯಾಗುತ್ತದೆ. ಅದು ಅನೇಕ ರೀತಿಯ ಒತ್ತಡಗಳಿಂದ ರೂಪುಗೊಳ್ಳುವ ಪ್ರಕ್ರಿಯೆಯಾಗಿರುವುದರಿಂದ ಸಹಜವಾಗಿಯೇ ಬರವಣಿಗೆಯು ಕಂಡುಕೊಳ್ಳುವ 'ಸಂಸ್ಕೃತಿ'ಯ ಪರಿಕಲ್ಪನೆಗೆ ಅದರದೇ ಆದ ಒತ್ತಾಯಗಳು, ಅನೇಕ ರೀತಿಯ ಇತಿಮಿತಿಗಳಿರುತ್ತವೆ. ಅನೇಕ ಸಂದರ್ಭದಲ್ಲಿ ಅದು ಸಂಸ್ಕೃತಿಯ ಮೂಲರೂಪವನ್ನು ಅಳಿಸಿ ಹೊಸದೊಂದು ರೀತಿಯಲ್ಲಿ ನಮ್ಮೆದುರು ನಿಲ್ಲುತ್ತದೆ.

ಮಾತು ಮತ್ತು ಬರವಣಿಗೆಯನ್ನುವ ಪ್ರಶ್ನೆಯನ್ನು ನೋಡಿ: ಮಾತು ಸಾಧ್ಯವಾದಷ್ಟು ಮೂಲಘಟನೆಗಳಿಗೆ; ಅದರ ಮೂಲರೂಪಕ್ಕೆ ಹತ್ತಿರವಾಗಿ ಇರುವಂತೆ ವರ್ತಿಸುತ್ತವೆ. ಹೀಗಾಗಿ ಮಾತು ಎನ್ನುವುದು ನಮ್ಮ ನಡುವೆ ಸಹಜ ವ್ಯಾಪಾರವಾಗಿದೆ ಮತ್ತು ಮಾತು ಆರೋಗ್ಯಕರವಾದ ಸಂಬಂಧವನ್ನು ಸೂಚಿಸುತ್ತದೆ. ಬರವಣಿಗೆಯನ್ನುವುದು ಇದಕ್ಕಿಂತ ಹೊರತಾದ ಪ್ರಕ್ರಿಯೆ, ಅದು ಒಂದು ರೀತಿಯ ಅಭಿವ್ಯಕ್ತಿಯ ಮಾಧ್ಯಮ, ' ಅನಕ್ಷರಸ್ಥ ಸಂಸ್ಕೃತಿ'; 'ಅಕ್ಷರಸ್ಥ ಸಂಸ್ಕೃತಿ' ಎಂದು ನಾವು ಕರೆದು ವರ್ಗೀಕರಣಗಳನ್ನು ಮಾಡಿಕೊಂಡಿದ್ದೇವೆ. ಈ ವರ್ಗೀಕರಣದಲ್ಲಿ 'ಅಕ್ಷರಸ್ಥ ಸಂಸ್ಕತಿ'ಎಂದು ಕರೆಯುವಾಗ ಅಲ್ಲಿ ಅಭಿವ್ಯಕ್ತಿಯ ಪ್ರಕಾರವು ಬೇರೆ ಎಂದು ಗುರುತಿಸುತ್ತೇವೆ. 'ಅಕ್ಷರಸ್ಥರ ಸಂಸ್ಕೃತಿ' 'ಅನಕ್ಷರಸ್ಥ ಸಂಸ್ಕೃತಿ'ಗಳು ಇನ್ನೊಂದು ಇರಲು ಸಾಧ್ಯವಿಲ್ಲ. ನಮ್ಮ ಗೃಹೀತವಾದ ನೆಲೆಯೆಂದರೆ, ಅಕ್ಷರಸ್ಥ ಸಂಸ್ಕೃತಿಯಲ್ಲಿ ಅಭಿವ್ಯಕ್ತಿಯ ಮಾಧ್ಯವೂ ಒಂದು . ಅದು ಬರವಣಿಗೆಗೆ ಸಂಬಂಧಿಸಿದ್ದು, ಅನಕ್ಷರಸ್ಥಸಂಸ್ಕೃತಿಯೆಂದು ನಾವುಯಾವುದನ್ನು ಕರೆಯುತ್ತೇವೋ ಅದರ ಅಭಿವ್ಯಕ್ತಿ ಮಾಧ್ಯಮವು ಮಾತಿಗೆ ಸಂಬಂಧಿಸಿದ್ದು, ಇಲ್ಲಿ ಭಾಷೆಯೇ ಮುಖ್ಯವಾಗಿದ್ದರೂ ಅದರ ಏರಿಳಿತಗಳು ಮಾತ್ರ ಬೇರೆ ಬೇರೆ . ಈ ರೀತಿಯ ತಿಳುವಳಿಕೆಗಳು ಮಾಡಿಕೊಳ್ಳುತ್ತಿರುವ ತಪ್ಪನ್ನು ಕೆ.ವಿ. ನಾರಾಯಣ ಅವರು ಹೀಗೆ ಗುರುತಿಸುತ್ತಾರೆ. 'ಒಂದು ಸಂಸ್ಕೃತಿಯಲ್ಲಿ ಪ್ರಧಾನತೆ ಅಧೀನತೆಯೆನ್ನುವುದು ಸಾಪೇಕ್ಷವಾದ, ಕಾಲಬದ್ಧವಾದ ಸಂಗತಿಯೇ ಹೊರತು ನಿರಂತರವಲ್ಲ. ಸಂಸ್ಕೃತಿಯನ್ನು ಒಂದು ಸಿದ್ಧವಸ್ತು ಎಂದು ತಿಳಿದು ಹೊರಗಿನಿಂದ ವೀಕ್ಷಿಸಿ ನೋಡುವ ಒಂದು ಜನ ಪ್ರಿಯವಾದ ವಿಧಾನವಿದೆ. ಅದಕ್ಕೆ ಬದಲಾಗಿ ಸಂಸ್ಕೃತಿಯನ್ನು ಒಂದು ಪ್ರಕ್ರಿಯೇ (Process) ಎಂದು ತಿಳಿದು ಒಳಗಿನಿಂದ ಗ್ರಹಿಸುವುದು ಹೆಚ್ಚು ಉಪಯುಕ್ತ ವಿಧಾನ' (ಉಲ್ಲೇಖ: ರಹಮತ್ ತರೀಕೆರೆ 1996. ಪು 12 ) ಕೆ.ವಿ. ನಾರಾಯಣ ಅವರ ಚಿಂತನೆಯಲ್ಲಿ ಅವರ ಸಾಂಸ್ಕೃತಿಕ ಗ್ರಹಿಕೆಗಳು ಪರಿಕರವನ್ನು ಸೂಚಿಸುತ್ತವೆ. ರಹಮತ್, ಕೆ.ವಿ.ಎನ್. ರ ಚಿಂತನೆಗಳ ಬಗೆಗೆ ನಾವು ತಳೆಯಬಹುದಾದ ನಿಲುವು ಏನು? ಅಥವಾ ರಚನೆಯ ಹಿನ್ನೆಲೆಯಲ್ಲಿ ಇವುಗಳ ವಿಶ್ಲೇಷಣೆ ಹೇಗೆ ? ಸೂಚಿಸಿಲ್ಲ.

ಡೆರಿಡಾ ಹೇಳಿದ್ದನ್ನು ಮತ್ತೊಮ್ಮೆ ಇಲ್ಲಿ ನೆನಪಿಸಿಕೊಳ್ಳಬಹುದು. ಮಾತೆಂಬುದು ಭಾಷೆಯ ಪ್ರಕ್ರಿಯೆಯಲ್ಲಿ ಆಲೋಚನೆಗೆ ಹತ್ತಿರವಿರುವ ಮಾಧ್ಯಮವಾದರೆ, ಬರವಣಿಗೆಯೆನ್ನುವುದು ಒಂದು

ರೀತಿಯಲ್ಲಿ ಆಂಶಿಕವಾದ ಭಾಗವಾಗಿದ್ದು, ಬರವಣಿಗೆಯಾಚೆಗೂ ಆಲೋಚನೆಯಿರುತ್ತದೆ. 'ಸಂಸ್ಕೃತಿ ಮತ್ತು ಬರವಣಿಗೆ ಯೆನ್ನುವ ಸಂದರ್ಭದಲ್ಲಿ ಪ್ರಾಯಶ: ಬರುವ ಪ್ರಮುಖವಾದ ತೊಡಕು ಕೂಡಾ ಇದೇ. ಬರವಣಿಗೆಯನ್ನು ಸಂಸ್ಕೃತಿಯ ಭಾಗವಾಗಿದೆಯೆಂದು ನಾವು ತಿಳಿದುಕೊಂಡರೂ ಅದು ಪೂರ್ಣವಾಗಿ ಈ ಸಂಗತಿಗಳನ್ನು ಒಳಗೊಂಡಿರುವುದಿಲ್ಲ ಮತ್ತು ಅದರ ಹೊರತಾಗಿಯೂ ಅಸ್ತಿತ್ವದಲ್ಲಿರುವ ಸಾಂಸ್ಕೃತಿಕ ಸಂಗತಿಗಳು ಕೂಡಾ (ಭಾರತೀಯ ಪರಿಸರದಲ್ಲಿ ಜಾನಪದವೆಂಬ ವರ್ಗೀಕರಣ) ಅರ್ಥ ಸತ್ಯವನ್ನು ಒಳಗೊಂಡಿರುತ್ತವೆ. ಹೀಗಾಗಿ ಮೌಖಿಕ ಪರಂಪರಯಲ್ಲಿ ಬಂದ 'ಸಂಸ್ಕೃತಿ; 'ಲಿಖಿತ ಸಂಸ್ಕೃತಿ'ಯೆನ್ನುವುದನ್ನು ನಾವು ಅಧ್ಯಯನ ಮಾಡಲು ಹೊರಟರೆ ನಮಗೆ ಸಿಗುವ ಸಾಮಗ್ರಿಗಳು ನಮ್ಮ ನಮ್ಮ ಪೂರ್ವ ಪ್ರಮೇಯಗಳನ್ನು ಆಧರಿಸಿಕೊಂಡಿರುತ್ತವೆ, ಸಂಸ್ಕೃತಿ ಚರ್ಚೆಯಲ್ಲಿ ನಾವು 'ಮೂಲದ ಸಮೀಪ ಹೋಗುತ್ತೇವೆಯೆಂದು, ಭಾವಿಸಿದರೂ ನಾವು ಆಧರಿಸಿಕೊಳ್ಳುವ ಸಾಮಗ್ರಿಗಳೇ ಒಂದು ರೀತಿಯ ಕಲ್ಪಿತ ಪುರಾಣವಾಗುವ ಅಪಾಯವು ಪ್ರಾಯಶ: ಹೀಗೆಯೇ ರೂಪುಗೊಳ್ಳುತ್ತದೆ.

ರೂಸೋ ಒಂದು ಸಂದರ್ಭದಲ್ಲಿ ಬರವಣಿಗೆಯೆನ್ನುವುದು ಭಾಷೆಯ ಸಂದರ್ಭದಲ್ಲಿ ಮಾತಿನ ಅನಂತರದ ಪ್ರಕ್ರಿಯೆ ಎಂದು ಕರೆಯುತ್ತಾನೆ. ಈ ಎರಡೂ ಪ್ರಕ್ರಿಯೆಗಳು ನಾವು ಯಾವುದನ್ನು ನಿಜವೆಂದು ಕರೆಯುತ್ತೇವೋ ಅದರಿಂದ ದೂರವೇ ಉಳಿಯುತ್ತವೆ ಎಂದು ಹಾಗಾಯಿತು ಸಂಸ್ಕೃತಿಯ ಚಿಂತನೆಯಲ್ಲಿ ಬರವಣಿಗೆ ಮತ್ತು ಮಾತು ಎರದ ಪ್ರಕ್ರಿಯೆಗಳು ಕೂಡಾ ಪೂರಕವಾಗಿ ವರ್ತಿಸುತ್ತವೆಯೇ ಹೊರತು ಅವು ಕೇವಲ ಸಾಂಸ್ಕೃತಿಕ ಚಲನಶೀಲತೆಯ ಸತ್ಯಗಳೆಂದು ಪರಿಗಣಿಸುವಂತಿಲ್ಲವೆಂದು ನಿರಚನವಾದಿಗಳು ನಂಬುತ್ತಾರೆ.

'ಸಂಸ್ಕೃತಿ'ಯ ಪರಿಕಲ್ಪನೆಯು ಒಂದು ಸ್ಥಿರವಾದ ಮತ್ತು ಮೌಲ್ಯಾತ್ಮಕವಾದ ವಿಧಾನ ಏನೂ ಅಲ್ಲ. ಸಂಸ್ಕೃತಿಯ ಚಿಂತನೆಯಲ್ಲಿ ರಚನಾವಾದಿಗಳು ಭಾವಿಸಿಕೊಂಡಂತೆ ಕೇಂದ್ರಿತವಾದ ಮೌಲ್ಯ ಸಂಬಂಧಿ ಪ್ರಶ್ನೆಗಳೆನ್ನುವುದು ಇಲ್ಲ. ಹಾಗೆಯೇ ಅದಕ್ಕೆ ಅನೇಕ ಅಂತರ್ ಪಠ್ಯಗಳಿರುತ್ತವೆ ಮತ್ತು ಅನೇಕ ಅರ್ಥಗಳಿರುತ್ತವೆ. ಒಂದು ಸಂಸ್ಕೃತಿ, ಒಂದು, ಮೌಲ್ಯ , ಒಂದು ಕೇಂದ್ರವೆನ್ನುವುದನ್ನು ನಿರಚನ ಸಿದ್ಧಾಂತವು ನಿರಾಕರಿಸುತ್ತದೆ. ಉದಾಹರಣೆಗೆ: ನಾವೀಗ ಬಳಸುತ್ತಿರುವ 'ಅಖಂಡ ಕರ್ನಾಟಕದ ಸಂಸ್ಕೃತಿ, 'ಅಖಂಡ ಭಾರತೀಯ ಸಂಸ್ಕೃತಿ' ಮುಂತಾದ ಪರಿಭಾಷೆಗಳು ಕೇಳುವುದಕ್ಕೆ ತುಂಬಾ ಆಕರ್ಷಕವಾಗಿದ್ದರೂ. ಈ ರೀತಿಯ ಅಖಂಡತೆಯ ಪರಿಕಲ್ಪನೆಯೇ ನಿರಚನದ ಪ್ರಕಾರ ಪ್ರಶ್ನಾರ್ಹ. ನಾವು ನಮಗೆ ಬೇಕಾದಂತೆ ಅಖಂಡ ಕರ್ನಾಟಕ ಸಂಸ್ಕೃತಿಯೆನ್ನುವ ಪರಿಕಲ್ಪನೆಯನ್ನು ಕಟ್ಟಿಕೊಂಡಿದ್ದೇವೇ ಅಷ್ಟೆ.

ಪುರಾಣಗಳು; ಐತಿಹ್ಯಗಳು; ಆಚರಣೆ ಮುಂತಾದವುಗಳನ್ನು ಸಂಸ್ಕೃತಿಯ ಭಾಗಗಳೆಂದು ಚರ್ಚಿಸುತ್ತವಷ್ಟೆ? ವಿಭಿನ್ನ ರೀತಿಯ ಸಂಸ್ಕೃತಿಗಳ ಅಧ್ಯಯನದಲ್ಲಿ ಇದನ್ನು ಪೂರಕ ಸಾಮಗ್ರಿಗಳೆಂದು ಪರಿಗಣಿಸುತ್ತಾರೆ. ಅನೇಕ ಸಂದರ್ಭಗಳಲ್ಲಿ ಈ ರೀತಿಯ ಸಂಸ್ಕೃತಿಗಳ ಅಧ್ಯಯನದಲ್ಲಿ ಕೆಲವು ನಿರ್ದಿಷ್ಟ ವಿನ್ಯಾಸಗಳು ಇರುತ್ತವೆಯೆಂದು ಪರಿಗಣಿಸುತ್ತೇವೆ. ಮೂರ್ತರೂಪದ ಈ ರೀತಿಯ ಪುರಾಣ, ಐತಿಹ್ಯ, ಆಚರಣೆಗಳ ಅಧ್ಯಯನವು ಸಂಸ್ಕೃತಿಯ ಅಧ್ಯಯನದಲ್ಲಿ ಬಹಳ ಕಾಲ ನಿರ್ದಿಷ್ಟ ರೂಪವಾಗಿ ಅಂಗೀಕರಿಸುವುದನ್ನು ನಿರಚನವು ವಿರೋಧಿಸುವುದಷ್ಟೇ ಅಲ್ಲ, ಅದರಾಚೆಗೆ ಇರುವ ಮನುಷ್ಯನ ಅಸ್ತಿತ್ವ ಮತ್ತು ಆಲೋಚನೆಗಳನ್ನು ಹುಡುಕಬೇಕೆಂದು ಹೇಳುತ್ತದೆ. ಯಾವುದೇ ಪುರಾಣಗಳು ಆಚರಣೆಗಳು ಆಯಾ ಸಮಾಜದ ವಿಧಿ- ನಿಷೇಧಗಳನ್ನು ಮಾತ್ರವೇ ಹೇಳುತ್ತವೆಯೆಂದು ಕೂಡಾ ಪರಿಭಾವಿಸುವಂದತಿಲ್ಲ. ವಿಭಿನ್ನ ರೀತಿಯ ನಿರೂಪಣೆಗಳು ಒಂದು ಸಮಾಜದಲ್ಲಿ ಅಸ್ತಿತ್ವದಲ್ಲಿ ಇರುವುದಕ್ಕೆ ಬೇರೆ ಬೇರೆ ಕಾರಣಗಳಿರುತ್ತದೆ. ಅದನ್ನು ಒರಸಿಹಾಕಿ ಬೇರೊಂದನ್ನು ಕೃತಕವಾಗಿ ಕಟ್ಟುವ ಕ್ರಮವು ಪ್ರಶ್ನಾರ್ಹವಾದುದು.

ಈ ರೀತಿಯ ಚಿಂತನಾಕ್ರಮದಲ್ಲಿ ಸರಳ ದ್ವಂದ್ವದ ಸಮೀಕರಣದ ಕುರಿತ ವಿರೋಧವಿದೆಯೆಂದು ಅರ್ಥಮಾಡಿಕೊಳ್ಳಬೇಕು, ತರ್ಕ ಮತ್ತು ನಿರ್ದಿಷ್ಟ ಪ್ರಮೇಯದ ಮೂಲಕ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳುವುದೆಂದರೆ ಅಂತಿಮವಾಗಿ ಎದುರು ಕಟ್ಟಿಕೊಳ್ಳಲಾಗಿರುವ ಸಂಸ್ಕೃತಿಯನ್ನು ಮಾತ್ರವೇ ಶೋಧಿಸುವುದು. ಸರಳ ದ್ವಂದ್ವದ ಪರಿಭಾಷೆಯು ಸಂಸ್ಕೃತಿ ಅಧ್ಯಯನದಲ್ಲಿ ಹೇಗೆ ಕೆಲಸ ಮಾಡುತ್ತದೆಯೆಂಬುದನ್ನು ನೋಡಿ; ಸರಳ ದ್ವಂದ್ವದ ಪ್ರಕಾರ ಸಂಸ್ಕೃತಿ × ನಿಸರ್ಗ ಎಂಬ ವರ್ಗೀಕರಣದಲ್ಲಿ ಒಂದಡೆ ಸಹಜವಾದುದು. ಅದರ ಎದುರುಗಡೆಗೆ 'ಕಟ್ಟಲಾಗಿರುವ ಸಂಸ್ಕೃತಿ ಇರುತ್ತದೆ. ಸಹಜವಾದುದೆಂದರೆ ನಾವು ಅದನ್ನು ಜಾನಪದವೆಂತಲೋ: ಗ್ರಾಮೀಣವೆಂತಲೋ ಅನಕ್ಷರಸ್ಥ ಸಂಸ್ಕೃತಿಯೆಂತಲೋ ಗುರುತಿಸುತ್ತೇವೆ. ಅಷ್ಟೆ ಅಲ್ಲ ; ಇವೆಲ್ಲವನ್ನು ತೀರಾ ಮುಗ್ಧವಾದುದು. ಮತ್ತು ಈ ಸಂಸ್ಕೃತಿಯು ತನ್ನ ಮುಗ್ಧವಾದ ಕೃತಕವಲ್ಲದ ಭಾಷೆಯಲ್ಲಿ ಅಭಿವ್ಯಕ್ತಿಯನ್ನು ಸಾಧಿಸುತ್ತದೆ ಎಂತಲೂ ಪರಿಗಣಿಸುತ್ತೇವೆ. ಸಂಸ್ಕೃತಿಯು ನಾಗರಿಕತೆಯ ಯಾವ ಕೇಡೂ ಮುಟ್ಟದಂತಹ ನಾಗರಿಕತೆಯ ಸ್ವಪ್ನವೂ ಬೀಳದಂತೆ ರೂಪುಗೊಂಡಿದೆಯೆಂದು ಭಾವಿಸುತ್ತೇವೆ. ಇದರಿಂದಾಗಿ ನಮ್ಮ ಅಧ್ಯಯನ ಕ್ರಮಗಳ ರೂಪುರೇಷೆಗಳು ಕೂಡಾ ನಿರ್ದಿಷ್ಟ ಪ್ರಮೇಯಗಳಾಚೆಗೆ ಸರಿಯುವುದಿಲ್ಲ. ನಮ್ಮಲ್ಲಿ ನಡೆಯುತ್ತಿರುವ ಅನೇಕ ಬುಡಕಟ್ಟುಗಳ ಸಂಶೋಧನೆ ಮತ್ತು ಅಧ್ಯಯನಗಳು ಈ ರೀತಿಯ ಪ್ರಮೇಯಗಳ ಮತ್ತು ತರ್ಕದ ನಿಯಂತ್ರಣಕ್ಕೆ ಒಳಗಾಗಿವೆ. ವೈದಿಕ ಸಂಸ್ಕೃತಿಗೆ ವಿರುದ್ಧವಾಗಿ ಇರಬಹುದಾದ ಬುಡಕಟ್ಟುಗಳು ತಮ್ಮದೇ ಸಾಂಸ್ಕೃತಿಕ ಪಾವಿತ್ರ್ಯವನ್ನು ಉಳಿಸಿಕೊಂಡಿವೆಯೆಂದು ನಾವು ಭಾವಿಸುತ್ತೇವೆ. ಈ ದೃಷ್ಟಿಯಿಂದಲೇ ಎಲ್ಲವನ್ನು ಹೊರತುಪಡಿಸಿದ 'ಒಂದು ಜನಾಂಗ' 'ಒಂದು ಸಂಸ್ಕೃತಿ'ಯ ಅಧ್ಯಯನಗಳು ನಮ್ಮಲ್ಲಿ ನಡೆಯುತ್ತವೆ. ಆದರೆ ಯಾವ ಸಂಸ್ಕೃತಿಯೂ ಅದು ಅದರಷ್ಟಕ್ಕೆ ಮುಗ್ಧವೂ ಅಲ್ಲ ಮತ್ತು ಅದರಷ್ಟಕ್ಕೆ ಅದು ಸಹಜವೂ ಅಲ್ಲ ಎಂಬುದನ್ನು ನಾವು ಮನಗಾಣಬೇಕು.

ಯಾವುದೇ ಒಂದು ಜನಾಂಗದ ಆಚರಣೆಯನ್ನು ನಾವು ಅಧ್ಯಯನ ಮಾಡುವಾಗಲೂ ಗಮನಿಸಬೇಕಾದ ಅಂಶವೆಂದರೆ- ಆಯಾ ಆಚರಣೆಗಳೇ ಆಯಾ ಜನಾಂಗದ ಮೇಲೆ ನಿರ್ದಿಷ್ಟ ಅಧಿಕಾರವನ್ನು ನಡೆಸುತ್ತವೆ ಮತ್ತು ಆಚರಣೆಗಳಾಚೆಗೂ ಅನೇಕ ಸಂಗತಿಗಳು ಇರುತ್ತವೆ ಎಂಬುದು. ಒಂದು ಆಚರಣೆಯು ಅಸ್ತಿತ್ವಕ್ಕೆ ಬಂದ ಮೇಲೆ ಅದರ ಹಿಂದೆ ಅನೇಕ ರೀತಿಯ ಭಾವನೆಗಳು ಇರುತ್ತವೆ. ನಮ್ಮಲ್ಲಿ ನಡೆಯುತ್ತಿರುವ ಅನೇಕ ಅಧ್ಯಯನಗಳು ಈ ರೀತಿಯ ಆಚರಣೆಗಳ ಕುರಿತಂತೆ ಅಧ್ಯಯನ ನಡೆಸುವಾಗ ಸದ್ಯ ಅವು ಪಡೆದುಕೊಂಡಿರುವ ಸಾಮಾಜಿಕ ಅಸ್ತಿತ್ವವನ್ನು ಕುರಿತು ಮಾತ್ರ ಅಶ್ರಯಿಸುತ್ತವೆ. ಆಚರಣೆಗಳು ಅಭಿವ್ಯಕ್ತಿಗೊಂಡ ಸಾಂಸ್ಕೃತಿಕ ಪರಿಕರವೇ ಹೊರತು ಅಂತಿಮವಲ್ಲ. ಹಾಗೆಯೇ ಅವು ಸಂಸ್ಕೃತಿಯಲ್ಲಿ ಕೇವಲ ಚಿಹ್ನೆಗಳು ಮಾತ್ರ.

ನಮ್ಮೆಲ್ಲಾ ಸಂಸ್ಕೃತಿಯ ಚಿಂತನೆಗಳು ಮತ್ತು ವಾಗ್ವಾದಗಳು ರೂಪುಗೊಳ್ಳುವುದು ಯಾವುದೋ ಒಂದು ಸತ್ಯವನ್ನು ಸಾಬೀತುಪಡಿಸುತ್ತಿದ್ದೇವೆ ಎನ್ನುವ ಅಹಂಕಾರದಲ್ಲಿ. ಇದರಿಂದ ನಮಗೆ ಲಭ್ಯವಾದ ಸಾಂಸ್ಕೃತಿಕ ವಿವರಗಳನ್ನು ನಾವು ನಮ್ಮ ನಿರ್ವಚನಕ್ಕೆ ಅನುಸಾರವಾಗಿ ನಿರ್ದಿಷ್ಟಗೊಳಿಸಿಕೊಳ್ಳುತ್ತೇವೆ.. ಅದಕ್ಕೊಂದು ಬರವಣಿಗೆಯ ಚಹರೆಗಳನ್ನು ತಂದುಕೊಡುತ್ತೇವೆ. ಹೀಗೆ ಬರವಣಿಗೆಯ ಚಹರೆಯನ್ನು ತಂದುಕೊಡುವುದೆಂದರೆ ಯಾವುದೇ ಸಂಸ್ಕೃತಿಯ ಕುರಿತ ಚಿಂತನೆಯಲ್ಲಿ ರೂಪಕೊಡುವುದು ಎಂದರ್ಥ. ಸಂಸ್ಕೃತಿಯ ಯಾವ ಬಗೆಯ ಚಿಹ್ನೆಗಳಿಗೂ ಅಧಿಕೃತ ಚಹರೆಗಳನ್ನು ಕೊಡುವುದು ಎಂದರೆ. ದುಂಡನೆಯ ಕಲ್ಲಿಗೆ ಶಿವಲಿಂಗವೆಂದು ಕರೆದ ಹಾಗೇ!

ಡಾ: ಕೇಶವಶರ್ಮ.ಕೆ/93

ಯಾವುದೇ ಬರವಣಿಗೆಯಾಗಲೀ: ಸಾಂಸ್ಕೃತಿಕ ಸಂಗತಿಗಳೇ ಆಗಲಿ ಅವು ಸ್ಥಿರವಾದ ಮತ್ತು ನಿರ್ದಿಷ್ಟವಾದ ಅರ್ಥಗಳನ್ನು ಹೊಂದಿರುವುದಿಲ್ಲ. ಎದುರುಗಡೆಗೆ ಇರುವ ಸಂಸ್ಕೃತಿಯೆನ್ನುವ ಪರಿಕಲ್ಪನೆಯಾಚೆಗೂ ಅನೇಕಾನೇಕ ಸಂಗತಿಗಳು ಇರುತ್ತವೆ. ಈ ದೃಷ್ಟಿಯಿಂದ ಸಂಸ್ಕೃತಿಯ ಪೂರ್ವ ಪಠ್ಯಗಳನ್ನು ಗ್ರಹಿಸುವುದು ಅವಶ್ಯವೆಂದು ನಿರಚನ ಸಿದ್ಧಾಂತವು ಪರಿಭಾವಿಸುತ್ತದೆ. ಜ್ಞಾನ ಮತ್ತು ಸಂಸ್ಕೃತಿಗೆ ಒಂದು ಕೇಂದ್ರ, ಒಂದು ರಚನೆ, ಒಂದು ಸತ್ಯ ಎಂಬುದಿಲ್ಲ. ಹಲವು ದಾರಿಗಳಿವೆ ಎಂಬ ಮಾತನ್ನೂ ಖಚಿತಪಡಿಸಬೇಕಾಗಿದೆ.

# ಅಧ್ಯಾಯ- 7

# ನಿರಚನ : ಸ್ತ್ರೀವಾದಿ ಸಿದ್ಧಾಂತ

ಜ್ಞಾನದ ಅಂತಿಮ ವಾರಸುದಾರಿಕೆಯು ಯಾರಿಗೆ ಸೇರಿದ್ದು? ಸಂಸ್ಕೃತಿಯೆಂಬ ಗೃಹೀತ ಸಂಗತಿಗಳನ್ನು ಕಟ್ಟಿದವರು ಯಾರು ? ಭಾಷೆ ಯಾರದು? ಮತ್ತು ಯಾಕೆ ಹೀಗಿದೆ? ಭಾಷೆಯಾಗಲೀ. ಕಟ್ಟಲಾಗಿರುವ ಸಂಸ್ಕೃತಿಯ ಪದರಗಳಾಗಲೀ, ಜ್ಞಾನವಾಗಲೀ ಇವಕ್ಕೆ ನಮ್ಮೆದುರು ಯಾವುದನ್ನು ಅಭಿವ್ಯಕ್ತಿಸಲಾಗಿದೆಯೋ ಅಷ್ಟನ್ನು ಮಾತ್ರ ಒಂದು ವೈಚಾರಿಕ ನೆಲೆಯುಂಬ ರೀತಿಯಲ್ಲಿ ಚರ್ಚಿಸಲು ಸಾಧ್ಯವೆ? ಹೀಗೆ ನಮ್ಮೆದುರು ಅಸಂಖ್ಯವಾದ ಪ್ರಶ್ನೆಗಳಿವೆ. ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಈಗಾಗಲೇ ಕೊಟ್ಟಿರುವುದರಿಂದ ಇನ್ನು ಯಾವುದೇ ಪ್ರಶ್ನೆಗಳಿಗೆ ಅವಕಾಶವಿಲ್ಲವೆಂದು ಬಾಯಿ ಮುಚ್ಚಿಸಲಾಗಿದೆ. ಉದಾಹರಣೆಗೆ : ಸಂಸ್ಕೃತಿಯೆಂದರೆ ಅದು ಪುರುಷ ಸಂಸ್ಕೃತಿ. ಭಾಷೆಯೆಂದರೆ ಗಂಡಿನದು. ಅಭಿವ್ಯಕ್ತಿಯೆಂದರೆ ಅದು ಬರವಣಿಗೆ . ಈ ರೀತಿಯ ಉತ್ತರವನ್ನು ಈಗಾಗಲೇ ಚಾಲ್ತಿಯಲ್ಲಿರುವ ಕಾರಣಕ್ಕೆ ಇನ್ನು ಮರು ಪ್ರಶ್ನೆಗಳಿಗೆ ಅವಕಾಶವಿಲ್ಲವೆಂದು ಹೇಳಲಾಗಿದೆ. ಇದಕ್ಕೆ ಅನುಗುಣವಾಗಿ ಒಂದು ನಿರ್ದಿಷ್ಟವಾದ ವೈಚಾರಿಕ ವಲಯವನ್ನು ನಿರ್ಮಿಸಲಾಗಿರುವುದು ಮಾತ್ರವಲ್ಲ; ಇಡಿಯ ಸಮಾಜ ಮತ್ತು ಗಂಡು ಹೆಣ್ಣಿನ ಸಂಬಂಧವನ್ನು ಈ ರೀತಿಯ ವೈಚಾರಿಕ ವಲಯಕ್ಕೆ ಅನುಸಾರವಾಗಿ ನಿರ್ಧರಿಸಲಾಗಿದೆ ಮತ್ತು ಕೆಲವು ತರ-ತಮ ವ್ಯತ್ಯಾಸಗಳನ್ನು ರೂಪಿಸಿಕೊಂಡು ಅದಕ್ಕನುಸಾರವಾಗಿ' ಸ್ತ್ರೀ' ಯನ್ನು ಕೃತಕವಾಗಿ ಗುರುತಿಸಲಾಗಿದೆ. ನಮ್ಮೆದುರು ಇಡಲಾಗಿರುವ ಸರಳ ದ್ವಂದ್ವಗಳನ್ನು ನೋಡಿ:

ಪುರುಷ× ಸ್ತ್ರೀ
ಸ್ಥಿರತೆ× ಚಂಚಲತೆ
ಮಾಮರ × ಲತೆ
ಸಾಗರ × ನದಿ

ಇದಿಷ್ಟೇ ಅಲ್ಲದೆ ಇವಕ್ಕನುಸಾರವಾಗಿಯೇ ಸಾಹಿತ್ಯದ ನಿರ್ವಚನವನ್ನು ಮಾಡಲಾಗಿದೆ. ಸಾಹಿತ್ಯದಲ್ಲಿಯೂ ಬರುವ ಸರಳ ದ್ವಂದ್ವಗಳನ್ನು ಹೀಗೆ ಗುರುತಿಸಬಹುದು:

ಮಾರ್ಗ × ದೇಸಿ.
ಮಹಾಕಾವ್ಯ × ಜಾನಪದ
ಶಿಷ್ಟ× ಪರಿಶಿಷ್ಟ
ಬರವಣಿಗೆ× ಮೌಖಿಕ
ಚಿರ × ಚರ

ಈ ತರಹ ವೈರುಧ್ಯಾತ್ಮಕವಾಗಿ ರೂಪುಗೊಂಡಿರುವ ಅನೇಕ ಸರಳ ದ್ವಂದ್ವದ ಸಮೀಕರಣಗಳಿಂದಾಗಿ ನಾವು 'ಸ್ತ್ರೀ' 'ಸ್ತ್ರೀ ಚಿಂತನೆ' 'ಸ್ತ್ರೀ ಸಂಸ್ಕೃತಿ' 'ಸ್ತ್ರೀಯರ ಬರವಣಿಗೆ''ಸ್ತ್ರೀಯರ ಮನಸ್ಸು' ಇತ್ಯಾದಿ ಸಂಗತಿಗಳನ್ನು ಒಂದು ವೈಚಾರಿಕ ವಲಯದೊಳಗೆ ಇಟ್ಟುಕೊಂಡು ನೋಡುತ್ತೇವೆ. ಹೀಗೆ ನಾವು ನೋಡುತ್ತಿರುವಾಗ, ನಾವು ಹೇಳುವ ಸರಿ ತಪ್ಪುಗಳ ಸಂಗತಿಯೂ ಕೂಡಾ ಇದಕ್ಕೆ ಅನುಗುಣವಾಗಿ ರೂಪು ಗೊಂಡಿದೆ. ನಿರಚನವಾದಿ ದೃಷ್ಟಿಕೋನದ ಸ್ತ್ರೀ ವಾದಿ ವಿಮರ್ಶೆಯು ಈ ರೀತಿಯ ಮೂಲ ಭೂತವೆನ್ನಬಹುದಾದ

ಮತ್ತು ಹೇರಲಾಗಿರುವ ಸರಳ ದ್ವಂದ್ವದ ನಿಲುವನ್ನು ಪ್ರಶ್ನಿಸುತ್ತದೆ.

ಗಂಡು ಮತ್ತು ಹೆಣ್ಣಿನ ಅಂಶ ಎಂದು ನಾವು ಗುರುತಿಸುವಾಗಲೇ ಒಂದು ವಿಷಯವನ್ನು ಮರೆತಿರುತ್ತೇವೆ. ಅದೇನೆಂದರೆ. ಹೆಣ್ಣು ಮತ್ತು ಗಂಡು ಎಂಬ ವರ್ಗೀಕರಣವು ಕೇವಲ ವಿಷಯ ನಿಷ್ಠವಾದ ವರ್ಗೀಕರಣವೇ ಹೊರತು ಅಂತಿಮವಾದ ಹಾಗೂ ನಿರ್ಧಾರಾತ್ಮಕವಾದ ವರ್ಗೀಕರಣವಲ್ಲ. ದೈಹಿಕ ವ್ಯತ್ಯಾಸ ಎನ್ನುವುದು ಒಂದು ಮಾನದಂಡವೆ? ನಮ್ಮಲ್ಲಿ ಪ್ರಚಲಿತದಲ್ಲಿರುವ ಅನೇಕ ವರ್ಗೀಕರಣಗಳಲ್ಲಿ ನಾವು ಗಂಡನ್ನು 'ಅಧಿಕಾರ' ಸೂಚನೆಯಾಗಿಯೂ ಹೆಣ್ಣನ್ನು ಶೋಷಿತಳನ್ನಾಗಿಯೂ ನೋಡುತ್ತೇವೆ. ಈ ತರಹ ನೋಡವುದರಿಂದ 'ಮಾರ್ಗ' 'ದೇಸಿ' (ಗಂಡು)(ಹೆಣ್ಣು) ಹೀಗೆ ಪರಿಭಾಷೆಗಳನ್ನು ಕೂಡಾ ನಿರ್ದಿಷ್ಟಗೊಳಿಸಿ ಅದಕ್ಕೆ ಅರ್ಥಗಳನ್ನು ಹೇರುತ್ತೇವೆ. ಅಷ್ಟೇ ಅಲ್ಲ, ಪುರುಷಕೇಂದ್ರಿತವಾದ ಚಿಂತನೆಯ ಕ್ರಮವನ್ನು ನಿರಚನಗೊಳಿಸುವುದು ಮತ್ತು ಸ್ತ್ರೀತ್ವದ ಮುಖಾಂತರ ಹೊಸದಾಗಿ ಎಲ್ಲಾ ಪ್ರಕ್ರಿಯೆಗಳನ್ನು ಅರ್ಥವಿಸಿಕೊಳ್ಳುವುದು ನಿರಚನ ದೃಷ್ಟಿಕೋನದ ಸ್ತ್ರೀವಾದದ ಪ್ರಮುಖ ಹೆಜ್ಜೆಗಳಾಗಿವೆ. ಈ ದೃಷ್ಟಿಯಿಂದ ಈಗಾಗಲೇ ರೂಪಿಸಲಾಗಿರುವ ಅನೇಕ ರೀತಿಯ ತರ್ಕಗಳನ್ನು ಸ್ತ್ರೀವಾದವು ಪ್ರಶ್ನಿಸುತ್ತದೆ. ಸ್ತ್ರೀ; ಸ್ತ್ರೀತ್ವ: ಮತ್ತು ಪುರುಷ ಮತ್ತು ಪುರುಷತ್ವವೆಂದು ವರ್ಗೀಕರಿಸುವಾಗಲೇ ಕೆಲವು ರೀತಿಯ ಮಿತಿಗಳಿರುತ್ತವೆ. ಎಂಬುದನ್ನು ನಾವು ಮರೆಯುಬಾರದು.

ಆದರೆ ಭಾಷೆಯ ಚರ್ಚೆಯಲ್ಲಿ ನುಸುಳಿಕೊಂಡು ಬಂದಿರುವ ಕೆಲವು ಪರಿಕಲ್ಪನೆಗಳನ್ನು ನೋಡಿ: ಇವು ಭಾಷೆಯನ್ನು ವಿಭಿನ್ನ ರೀತಿಯಲ್ಲಿ ವರ್ಗೀಕರಿಸುತ್ತದೆ. ಭಾಷೆಯಲ್ಲಿನ ಗಂಡುಸುತನದ ಅಥವಾ ಗಂಡು ಭಾಷೆ ಮತ್ತು ಸ್ತ್ರೀತ್ವದ ಭಾಷೆ; ಒಳ್ಳೆಯತನ ಮತ್ತು ಕೆಟ್ಟತನ ಈ ರೀತಿಯ ವರ್ಗೀಕರಣಗಳು ಪರಸ್ಪರ ವಿರೋಧಾಭಾಸದಿಂದ ಕೂಡಿದ್ದು ಒಂದರ ಅರ್ಥವಂತಿಕೆಯು ಮತ್ತೊಂದರ ಅರ್ಥವಂತಿಕೆಯ ಮೇಲೆ ಹೇರಲ್ಪಡುತ್ತದೆ. ಭಾಷೆಯು ವಾಸ್ತವವನ್ನು ಎತ್ತಿಹಿಡಿಯುತ್ತದೆಯೆಂದು ನಾವೆಷ್ಟೇ ಹೇಳಿದರೂ ಅಂತಿಮವಾಗಿ ಭಾಷೆಗೂ ನಮ್ಮ ನಿಜಕ್ಕೂ ವ್ಯತ್ಯಾಸವಿದೆಯೆಂಬುದನ್ನು ಮರೆಯುತ್ತೇವೆ.

'ರಚನೋತ್ತರ ಸ್ತ್ರೀವಾದ' ದಲ್ಲಿ ಬರವಣಿಗೆಯೆಂದರೆ ಅದು ನಿರ್ದಿಷ್ಟ ಅರ್ಥದ ಪ್ರಶ್ನೆಯಲ್ಲ. ಸಾಹಿತ್ಯ ಕೃತಿಯ ಅರ್ಥವು ನಿರ್ದಿಷ್ಟವಾಗಿದೆ. ಕೃತಿಯನ್ನು ಈ ರೀತಿಯಲ್ಲಿಯೇ ಓದಬೇಕು. ಈ ರೀತಿಯಲ್ಲಿಯೇ ಅರ್ಥವಿಸಬೇಕು ಎಂಬುದನ್ನು ನಿರಚನವಾದಿ ದೃಷ್ಟಿಕೋನದ ಸ್ತ್ರೀವಾದಿಗಳು ನಿರಾಕರಿಸುತ್ತಾರೆ. ಯಾವುದೇ ಒಬ್ಬ ಲೇಖಕನ ಬರವಣಿಗೆಯೆಂದರೆ ಅದು ಅವನ ಜ್ಞಾನದ ಪ್ರಶ್ನೆಯೆಂತಲೂ, ಅದು ಅವನ ಅಭಿವ್ಯಕ್ತಿಯ ಪ್ರಶ್ನೆಯೆಂತಲೂ ನಾವು ಪರಿಭಾವಿಸುತ್ತೇವೆ. ಅಷ್ಟೇ ಅಲ್ಲ. ಸಾಹಿತ್ಯದ ನಿರೂಪಣೆಯೆಂದರೆ ಅದಕ್ಕೊಂದು ಸ್ವರೂಪವಿರಬೇಕು ಮತ್ತು ಅದು ಹೀಗೆಯೇ ಇರಬೇಕು ಎಂದು ಹೇಳುವ ಕ್ರಮವೇ ಪ್ರಶ್ನಾರ್ಹ. ಈಗಾಗಲೇ ಸ್ಥಾಪಿತವಾದ ನಿರೂಪಣೆಯ ಕ್ರಮ-ಭಾಷಿಕ ಕ್ರಮವೆಂಬುದನ್ನು ನಾವು ಮಾತಾಡುತ್ತಿರುವಾಗ ಅದರ ಮುಖಾಂತರವೇ ಪುರುಷಕೇಂದ್ರಿತ ಚಿಂತನೆಯ ಕ್ರಮವನ್ನು ಪ್ರತಿಪಾದಿಸುತ್ತಿರುತ್ತೇವೆ. ಆದರೆ ನಿರಚನ ದೃಷ್ಟಿಕೋನದ ಸ್ತ್ರೀವಾದಿಗಳು ಅದನ್ನು ಕೂಡ ಪ್ರಶ್ನಿಸುತ್ತಾರೆ.

ಬರವಣಿಗೆಯೆಂದರೆ ಯಾವುದೇ ಒಬ್ಬ ಲೇಖಕನ ಸ್ವಾಯತ್ತವಾದ ಸಂಗತಿ ಅಲ್ಲ ಮತ್ತು ಅದು ಲೇಖಕನು ಹೊಸದಾಗಿ ಸೃಷ್ಟಿಸುವ ಪ್ರಕ್ರಿಯೆಯೂ ಅಲ್ಲ. ಹಾಗೆಯೇ ಬರವಣಿಗೆಯ ಆಚೆಗೂ ಸತ್ಯವಿದೆ. ಲೇಖಕನ ಎಲ್ಲ ಆಲೋಚನೆಗಳು ಬರಹದಲ್ಲಿ ಒಡಮೂಡುವುದಿಲ್ಲ. ಹೀಗಾಗಿ ಒಂದು ಬರವಣಿಗೆಯಲ್ಲಿಯೇ ಅನೇಕ ಪಠ್ಯಗಳಿರುತ್ತವೆ ಮತ್ತು ಅದನ್ನು ಮೀರಿಯೂ ಲೇಖಕನ ಗ್ರಹಿಕೆಗಳಿರುತ್ತವೆ. ಈ ರೀತಿಯ ಅಂಶಗಳನ್ನು ನಿರಚನ ಸಿದ್ಧಾಂತವು ಪ್ರತಿಪಾದಿಸುತ್ತದೆಯಷ್ಟೆ? ಹೀಗಾಗಿ ಒಬ್ಬ ಬರಹಗಾರ

ಒಂದು ಕೃತಿಯಿಂದ ಮತ್ತೊಂದು ಕೃತಿಗೆ ಬಂದಾಗ ಭಿನ್ನನಾಗುತ್ತಾನೆ. ಬರವಣಿಗೆಯ ವಿಷಯದಲ್ಲಿಯೂ ಬದಲಿಸುತ್ತಾನೆ. ಈ ರೀತಿಯ ಚಲನಶೀಲತೆ ಕ್ರಿಯಾತ್ಮಕವಾದುದು ಮಾತ್ರವೇ ಅಲ್ಲ ಒಬ್ಬ ಲೇಖಕ ಅನೇಕ ಸಂದರ್ಭಗಳಲ್ಲಿ ಬೇರೆ ಬೇರೆಯಾಗುತ್ತಾ ಹೋಗುತ್ತಾನೆ. ನಿರ್ದಿಷ್ಟ ರೀತಿಯ ಬರವಣಿಗೆಯು ಸಾಧ್ಯವಾಗದೇ ಹೋಗುವುದು ಈ ಕಾರಣಕ್ಕೆ ಇರಬೇಕು. ಅಷ್ಟೇ ಅಲ್ಲ, ಒಬ್ಬ ಲೇಖಕ ಬರವಣಿಗೆಯಲ್ಲಿ ಲಿಂಗ ಬದಲಾವಣೆಯನ್ನು ಮಾಡಿಕೊಳ್ಳುತ್ತಾನೆ. ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ಗಂಡು ಮತ್ತು ಹೆಣ್ಣು ಎಂಬ ಸಂಬಂಧವು ತೀರಾ ಸರಳವಾದ ವರ್ಗೀಕರಣವನ್ನು ಹೊಂದಿಲ್ಲ. ಹಾಗೆಯೇ ನಮ್ಮ ಪುರಾಣ ಪ್ರತೀಕ ಶಿವ ಪಾರ್ವತಿಯರ ಕಲ್ಪನೆಯಲ್ಲಿ ಶಿವ ಬೇರೆ ಮತ್ತು ಪಾರ್ವತಿ ಬೇರೆ ಎಂಬ ಪರಿಕಲ್ಪನೆಗಳಿಲ್ಲ. ಒಂದಕ್ಕೊಂದು ಸಂಬಂಧವನ್ನು ಇಟ್ಟುಕೊಂಡಿದೆ, ರಚನೋತ್ತರವಾದದ ಸಂಬಂಧದಲ್ಲಿ ಸ್ತ್ರೀವಾದಿಗಳು ಹೇಳುವ ಪ್ರಮುಖ ವಿಷಯವೆಂದರೆ ಬರವಣಿಗೆಯೆಂದರೆ ಅದು ಒಂದು ವಸ್ತುವನ್ನು ನಿರ್ದಿಷ್ಟವಾಗಿ ಗ್ರಹಿಸಿ, ನಿರೂಪಿಸುವ ಕ್ರಮವಲ್ಲ. ಅದಕ್ಕಿಂತ ಹೆಚ್ಚಾಗಿ ಒಂದು ವಸ್ತುವನ್ನು ನಾವು ಬೇರೆ ಬೇರೆ ಪ್ರಮೇಯಗಳ ಮೂಲಕವೇ ಗ್ರಹಿಸುತ್ತೇವೆ. ಮತ್ತು ವಸ್ತುಗ್ರಹಿಕೆಯಲ್ಲಿರುವ ಅನೇಕ ಪ್ರಮೇಯಗಳು 'ಮೊದಲೇ ನಿರ್ಧರಿತವಾಗಿರುವಂಥದ್ದು. ಈ ಮೊದಲೇ ಹಾಗೆ ನಿರ್ಧರಿತವಾಗಿರುವ ಪೂರ್ವ' ಪ್ರಮೇಯಗಳನ್ನು ಒಡೆಯದೇ ಹೋದರೆ 'ಲಿಂಗ ವೈದೃಶ್ಯ'ದ ಪರಿಕಲ್ಪನೆಗಳು ಕೂಡ ಹಾಗೆಯೇ ಉಳಿದುಕೊಂಡು ಬಿಡುತ್ತವೆ. ಪೂರ್ವಪ್ರಮೇಯಗಳೆಂದರೆ ನಮ್ಮಲ್ಲಿ ಈಗಾಗಲೇ ವಸ್ತುವನ್ನು ಆಲೋಚಿಸುವ ಕ್ರಮಕ್ಕೂ ಕೆಲವು ರೀತಿಯ ಚಿಂತನೆಗಳನ್ನು ಹೇರಲಾಗಿರುವುದು. ನಾವು ಯಾವುದೇ ವಸ್ತುವನ್ನು ಗ್ರಹಿಸುವುದೆಂದರೆ ನಮ್ಮ ನಮ್ಮ ಭಾಷಿಕ ರಚನೆಯಲ್ಲಿ ಗ್ರಹಿಸುವುದು ಎಂದು ಹೇಳುತ್ತಿರುತ್ತೇವೆ. ಆದರೆ ಈ ರೀತಿಯ ಭಾಷಿಕ ರಚನೆಯನ್ನು ಯಾವ ರೀತಿಯಲ್ಲಿ ರಚಿಸಲಾಗಿದೆ? ಆ ಭಾಷಿಕ ರಚನೆಯೇ ಪುರುಷನ ದೃಷ್ಟಿಕೋನಕ್ಕೆ ಅನುಸಾರವಾಗಿ ನಿರ್ಧರಿಸಲಾಗಿಲ್ಲವೆ? ಅಷ್ಟೇ ಅಲ್ಲ ಭಾಷಿಕ ರಚನೆಯಲ್ಲಿ ರೂಪುಗೊಂಡಿರುವ ಸರಳ ದ್ವಂದ್ವದ ಪರಿಕಲ್ಪನೆಗಳು ಕೂಡಾ ಪುರುಷಕೇಂದ್ರಿತ ಚಿಂತನೆಯಿಂದಲೇ ಶುರುವಾದ ಮಾದರಿಗಳಾಗಿವೆ. ಇದರ ಪರಿಣಾಮವೆಂದರೆ - ಸರಳ ದ್ವಂದ್ವದ ಪರಿಕಲ್ಪನೆಗಳಲ್ಲಿ ಗಂಡು ಮತ್ತು ಹೆಣ್ಣು ಎಂಬ ಹೇರಲಾಗಿರುವ ಅರ್ಥವಂತಿಕೆಗಳು ರೂಪುಗೊಂಡಿವೆ. ಅಷ್ಟೇ ಅಲ್ಲ ಇದರ ಪರಿಣಾಮವಾಗಿ ನಮ್ಮ ಚಾಲ್ತಿಯಲ್ಲಿರುವ ಅನೇಕ ಪರಿಭಾಷೆಗಳು ಗಂಡು ಮತ್ತು ಹೆಣ್ಣು ಎಂಬ ವರ್ಗೀಕರಣವನ್ನು ಮಾಡುವುದರೊಂದಿಗೆ ಪರಿಕಲ್ಪನೆಗಳ ಚಿಂತನೆಯಲ್ಲಿ ಒಂದು ಅನುಕಮತೆಯನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಹೀಗೆ ಮಾಡಿರುವುದರಿಂದಲೇ ಚಾಲ್ತಿಯಲ್ಲಿರುವ ಅನೇಕ ಪರಿಕಲ್ಪನೆಗಳು ತುಂಬಾ ಸೀಮಿತ ಮತ್ತು ಪುರುಷಕೇಂದ್ರಿತ ಚಿಂತನೆಯ ಭಾರದಲ್ಲಿ ಕುಸಿಯುತ್ತವೆ. 'ಭೂಮಿ ಹೆಣ್ಣು' 'ಆಕಾಶ ಗಂಡು' ಎಂಬ ಪರಿಕಲ್ಪನೆಯನ್ನು ನಾವು ಮೊದಲಿನಿಂದಲೂ ಒಪ್ಪಿಕೊಂಡು ಬಂದಿದ್ದೇವೆ. ಭೂಮಿ ಯಾಕೆ ಹೆಣ್ಣಾಗಬೇಕು? ಭೂಮಿ ಹೆಣ್ಣಾಗುವುದೆಂದರೇನು? ಪಿತೃರೂಪಿ ಸಂಸ್ಕೃತಿಯು ಈ ರೀತಿಯ ಪರಿಕಲ್ಪನೆಯನ್ನು ನಮ್ಮ ಮುಂದೆ ಇಡುವಾಗಲೇ ಕೆಲವು ಅರ್ಥಗಳನ್ನು ಅದಕ್ಕೆ ಹೇರುತ್ತವೆ. ಈ ರೀತಿಯ ಅರ್ಥಗಳನ್ನು ಹೇರಿದೆಯೇ ಹೊರತು ಅದು ಹಾಗೆಯೇ ಆಗಬೇಕಾಗಿಲ್ಲ. 'ಹೆಣ್ಣು 'ಭೂಮಿ' 'ಹೆಣ್ಣು ಗರ್ಭಧರಿಸುವವಳು' 'ಹೆಣ್ಣು ತಾಯಿ' 'ಭೂಮಿ ತಾಯಿ'.

ಹೆಣ್ಣು-ಸ್ವತಂತ್ರವಲ್ಲದ್ದು; ಬೇರೆಯ ಆಶ್ರಯವನ್ನು ಪಡೆಯುವಂಥದ್ದು. ಈ ರೀತಿಯ ತಿಳುವಳಿಕೆಯದೆಸೆಯಿಂದಾಗಿ 'ಭೂಮಿ'ಯೆಂಬುದನ್ನು ಬೇರೆ ಬೇರೆ ರೀತಿಯ ಅನುಕ್ರಮತೆಯಲ್ಲಿ ಇರಿಸಲಾಗಿದೆ. ಮಾತ್ರವಲ್ಲ; ಗಂಡಿನ ಅಧೀನವಾಗಿರುವ ಹೆಣ್ಣು ಎಂಬ ಪರಿಕಲ್ಪನೆಯನ್ನೇ ಭೂಮಿಯ ಕುರಿತೂ ಮುಂದುವರಿಸಲಾಗಿದೆ. ಈ ರೀತಿಯ ಪರಿಕಲ್ಪನೆಯನ್ನೇ ಮುಂದುವರಿಸಿಕೊಂಡು 'ಹೆಣ್ತನ'ದ

ಅನುಭವದ ಕುರಿತು ಮಾತಾಡುವುದೆಂದರೆ ಒಂದು ಬಲೆಯೊಳಗೆ ಸಿಕ್ಕಿಹಾಕಿಕೊಂಡಂತೆ. ಪರಿಕಲ್ಪನಾತ್ಮಕ ಅನುಕ್ರಮತೆಯನ್ನು ಭಂಜನಗೊಳಿಸುವ ಮುಖಾಂತರ ಮತ್ತು ಸತ್ಯ ಮುಂತಾದವನ್ನು ಬಹುತ್ವದಲ್ಲಿ ಕಾಣುವ ಮುಖಾಂತರವೇ ನಿರಚನವಾದಿ ಸ್ತ್ರೀವಾದದ ಚರ್ಚೆಯು ಶುರುವಾಗುತ್ತವೆ. ಒಂದು ಕೃತಿಯ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಅನೇಕ ತಾತ್ತ್ವಿಕತೆಗಳು, ಸಾಮಾಜಿಕ ಒತ್ತಡಗಳು, ಅಧಿಕಾರದ ಪರಿಕಲ್ಪನೆಗಳು , ಕೃತಿಯ ರೂಪಕ್ಕೆ ಇಳಿಯುವ ಸಂದರ್ಭದಲ್ಲಿ ಅದು ಪಡೆದುಕೊಳ್ಳುವ ಭಿನ್ನತೆಗಳು ಇವೆಲ್ಲಾ ನಿರಚನವಾದಿ ಸ್ತ್ರೀವಾದದ ಗಮನದಲ್ಲಿದೆ ಸ್ವಲ್ಪ ವಿವರಿಸಬೇಕೆಂದರೆ - ರಾಮಾಯಣದಲ್ಲಿ ಸೀತೆಯನ್ನು ಆದರ್ಶ ಸ್ತ್ರೀಯೆಂಬಂತೆ ಚಿತ್ರಿಸಲಾಗಿದೆ. ಅವಳು ಒಳ್ಳೆಯವಳು, ಪತಿವ್ರತೆ, ಗಂಡನ ನೆರಳನ್ನು ಅಶ್ರಯಿಸಿಕೊಂಡವಳು ಇತ್ಯಾದಿ . ಈ ರೀತಿ ಮಾತಾಡುವಾಗ ಒಳ್ಳೆಯ ಮತ್ತು ಕೆಟ್ಟ ಎಂಬ ಪರಿಭಾಷೆಯನ್ನು ಸರಳವಾಗಿರಿಸಿಕೊಳ್ಳಲಾಗಿದೆ. ಈ ಕಾರಣಕ್ಕಾಗಿಯೇ ರಾಮಾಯಣದಲ್ಲಿ ಸೀತೆಯ ಎದುರು ಶೂರ್ಪನಖಿಯನ್ನು ತರಲಾಗಿದೆ. ಸೀತೆ ಒಳ್ಳೆಯತನದ ಎದುರು ಶೂರ್ಪನಖಿಯ ಕೆಡುಕು ಇದೆ . ಈ ರೀತಿ ಮಾಡುವ ಮುಖಾಂತರವೇ ಸ್ತ್ರೀಯರಿಬ್ಬರ ವಿಭಿನ್ನ ಗುಣಗಳನ್ನು ಸ್ತ್ರೀತ್ವಕ್ಕೆ ಎರಡು ಮಾದರಿಗಳನ್ನು ರಾಮಾಯಣವು ಪರಿಚಯಿಸುತ್ತದೆ. ಹಾಗೆ ನೋಡಿದರೆ ಸೀತೆಯು ಒಳ್ಳೆಯ ಕುಲದಲ್ಲಿ ಹುಟ್ಟಿದವಳು. ಆದರೆ ಶೂರ್ಪನಖಿಯು ರಕ್ಕಸ ಕುಲ ಸಂಜಾತೆ . ಎರಡು ಮಾದರಿಗಳಲ್ಲಿಯೂ ಕೃತಿಯು ಯಾವುದು ಶ್ರೇಷ್ಠ ? ಯಾವುದು ಕನಿಷ್ಠ ಎಂಬ ಆಯ್ಕೆಯನ್ನು ಮುಂದಿಡುತ್ತದೆ. ಆದರೆ ಎರಡು ಆಯ್ಕೆಗಳಾಚೆಗೂ ಸ್ತ್ರೀತ್ವದ ಅಂಶವಿದೆ ಎಂಬುದನ್ನು ಮರೆಯಲಾಗದು. ಹಾಗೆಯೇ ಅದು ಸೀತೆ ಅಥವಾ ಶೂರ್ಪನಖಿಯ ಮಾದರಿಯೂ ಆಗಬೇಕಿಲ್ಲ. ಸ್ತ್ರೀತ್ವವೆಂದರೆ ಅದರಾಚೆಗೆ ಉಳಿಯುವ ಮಾದರಿಯೂ ಹೌದು. ಸೀತೆ ಅಥವಾ ಶೂರ್ಪನಖಿಯೆಂಬ ಸೀಮಾ ರೇಖೆಯನ್ನು ಎಳೆಯುವ ಮಾದರಿಯಲ್ಲಿ ಸ್ತ್ರೀತ್ವವೇ ಅದರಾಚೆಗೆ ಉಳಿಯುವ ಸಾಧ್ಯಯಿರುತ್ತದೆ. ಇದರಿಂದ ಉಂಟಾಗುವ ಮತ್ತೊಂದು ಸಮಸ್ಯೆಯನ್ನು ನೋಡಿ: ಸ್ತ್ರೀತ್ವ ಮತ್ತು ಸ್ವಾತಂತ್ರ್ಯವೆಂಬ ಪರಿಕಲ್ಪನೆಯನ್ನು ಒಡೆದು ಮಿತಿಯೊಳಗೆ ತರುತ್ತದೆ.

ನಮ್ಮ ಆಧುನಿಕ ಜ್ಞಾನದ ಮಾದರಿಗಳು ವಿಶೇಷ ಅಧ್ಯಯನವೆಂಬ ಹೆಸರಿನಲ್ಲಿ ಬರುತ್ತಿದೆಯೆಷ್ಟೆ? ಈ ರೀತಿಯ ವಿಶೇಷ ಅಧ್ಯಯನಗಳು ಮನ:ಶಾಸ್ತ್ರ ಶಿಕ್ಷಣ: ವೈದ್ಯಕೀಯ ವಿಜ್ಞಾನ ಎಲ್ಲದರಲ್ಲೂ ಇವೆ. ಈ ಜ್ಞಾನದ ಮಾದರಿಗಳು ರೂಪಿಸುವ ಸಂಗತಿಗಳೆಂದರೆ - ಮನುಷ್ಯನ ದೇಹವನ್ನು ಪರೀಕ್ಷೆಗೆ ಒಳಪಡಿಸುವ : ಹಾಗೂ ಶಿಸ್ತು ಬದ್ಧವಾದ ಕಲಿಕೆಯ ಕ್ರಮವನ್ನು ಅಳವಡಿಸುವ ಪ್ರಕ್ರಿಯೆಗಳಾಗಿವೆ. ಆ ಜ್ಞಾನದ ಮಾದರಿಗಳಲ್ಲಿಯೇ ಲೈಂಗಿಕವಾಗಿ ತುಳಿತಕ್ಕೆ ಒಳಗಾದವರು ಸ್ವಾತಂತ್ಯದ ಆಯ್ಕೆಯನ್ನು ಇಟ್ಟುಕೊಳ್ಳಬೇಕಾಗಿದೆ.

ಸ್ತ್ರೀ ಸ್ವಾತಂತ್ರ್ಯವೆಂಬ ಪ್ರಶ್ನೆಯು ಆಧುನಿಕ ಜಗತ್ತಿನ ಜ್ಞಾನದ ಮಾದರಿಗಳ ಜೊತೆಗೆ ನಡೆಸುವ ಸಂವಾದವಾಗಿದೆ. ಈ ರೀತಿಯ ಸಂವಾದಗಳು ಅಂತಿಮವಾಗಿ ಲಿಂಗ ವೈದೃಶ್ಯಗಳನ್ನು ಒಳಗೊಂಡಿವೆ ಕೂಡಾ. ಒಂದು ನಿರ್ದಿಷ್ಟ ಸಾಮಾಜಿಕ ಸಂರಚನೆಯ ಒಳಗಡೆಗೆ ರೂಪುಗೊಳ್ಳುವ ಜ್ಞಾನವ ಮಾದರಿಗಳಿಂದಲೇ ಕೆಲವು ರೀತಿಯ ನಿಯಮಗಳು ಕೂಡಾ ರೂಪುಗೊಂಡಿರುತ್ತವೆ. ಅದಕ್ಕೆ ಅನುಗುಣವಾದ ರೂಪಕಗಳನ್ನು ಧರಿಸಿರುತ್ತವೆ. ಇದರಿಂದಾಗಿ ಸ್ತ್ರೀಯೆಂದರೆ ಯಾರು ? ಎಂಬ ಪ್ರಶ್ನೆಯನ್ನು ಕೇಳಿದರೆ ಕೆಲವು ಸರಳವಾದ ಉತ್ತರಗಳು ದೊರಕುತ್ತವೆ. ಸ್ತ್ರೀಯೆಂದರೆ ದೇಹದ ರಚನಾಶಾಸ್ತ್ರದ ಹಿನ್ನೆಲೆಯಲ್ಲಿ ಈ ರೀತಿಯ ಉತ್ತರವನ್ನು ಕೊಡುತ್ತೇವೆ. ಯಾರಿಗೆ ಮೊಲೆಯಿದೆಯೋ ಋತು ಸ್ರಾವವನ್ನು ಅನುಭವಿಸುತ್ತಾಳೋ, ಗರ್ಭವಿದೆಯೋ ಅವಳು ಸ್ತ್ರೀ. ಹಾಗೆಯೇ ಸ್ತ್ರೀಗೆ ಗಡ್ಡ- ಮೀಸೆಯು ಬರುವುದಿಲ್ಲ

ಇತ್ಯಾದಿ. ಈ ಬಗೆಯ ಸರಳವಾದ ತಿಳುವಳಿಕೆಯಿಂದಲೇ ಸ್ತ್ರೀಯೆಂದರೆ ಅವಳನ್ನು ಸುಲಭವಾಗಿ ಗುಲಾಮ ವರ್ಗಕ್ಕೂ ಸೇರಿಸಿಬಿಡುತ್ತೇವೆ. ನಮ್ಮ ಈರೀತಿಯ ತಿಳುವಳಿಕೆಯಿಂದ ವರ್ಗೀಕರಣ ಮಾಡಿಕೊಂಡರೆ ಅದೇ ಸತ್ಯವೆಂಬಂತೆ ಪರಿವರ್ತನೆಗೂ ಗುರಿಯಾಗುತ್ತದೆ. ಅದರಾಚೆಗೆ ದಾಟುವುದಿಲ್ಲ ಹಾಗೂ ಈ ಬಗೆಯ ತಿಳುವಳಿಕೆಯಿಂದ ಸ್ತ್ರೀಯರ ಬರವಣಿಗೆಯು ಗಂಡಿನ ಬರವಣಿಗೆಯಿಂದ ಬೇರೆಯೆಂತಲೂ, ಸ್ತ್ರೀಯರ ಬರವಣಿಗೆಯೆಂದರೆ ಅದು ಸ್ತ್ರೀತ್ವದ ಚಾಂಚಲ್ಯ ಬರವಣಿಗೆಗೂ ದಾಟಿ ಬಿಡುತ್ತದೆಯೆಂದೂ ಸುಲಭವಾಗಿ ಹೇಳಿಬಿಡುತ್ತೇವೆ. ನಿರಚನ ದೃಷ್ಟಿಕೋನದ ಸ್ತ್ರೀವಾದಿಗಳು ಈ ರೀತಿಯ ಚಿಂತನೆಯ ಕ್ರಮಗಳನ್ನು ಪ್ರಶ್ನಿಸುತ್ತಾರೆ.

ರಚನೋತ್ತರ ಸ್ತ್ರೀವಾದದಲ್ಲಿ ಮನಃಶ್ಶಾಸ್ತ್ರದ ಪರಿಕರವನ್ನು ಬಳಸಿಕೊಳ್ಳಲಾಗಿದ್ದು ಅದರ ಮುಖಾಂತರ ಪುರುಷ ಕೇಂದ್ರಿತವಾದ ಚಿಂತನೆಯ ಕ್ರಮವನ್ನು ಹಾಗೂ ಅದು ಬಳಸಿಕೊಂಡ ಅರ್ಥ ಹೇರಿಕೆಯ ವಿಧಾನವನ್ನು ವಿರೋಧಿಸಲಾಗಿದೆ. ಎರಡನೆಯದಾಗಿ ಹೀಗೆ ಮಾಡುವುದರ ಮುಖಾಂತರವೇ ಸ್ತ್ರೀತ್ವದ ಅನನ್ಯತೆಯನ್ನು ಪುನರ್ ರೂಪಿಸಬೇಕೆಂದು ಅದು ಭಾವಿಸುತ್ತದೆ. ಪುನರ್ ರೂಪಿಸುವುದೆಂದರೆ ಸ್ತ್ರೀವಾದವು ಹೊಸ ರೀತಿಯಲ್ಲಿ ಕೃತಿಯನ್ನು ಓದುವುದು ಮತ್ತು ಅರ್ಥೈಸುವುದು ಎಂದರ್ಥ.

ಈಗಾಗಲೇ ಹೇರಲಾಗಿರುವ ಅರ್ಥ ನಿಯಂತ್ರಣವನ್ನು ವಿರೋಧಿಸುವ ಮೂಲಕ ಸ್ತ್ರೀವಾದಿ ಚಿಂತನೆಯ ಕ್ರಮವು ಒಂದು ಕೃತಿಯನ್ನು ಬಹುಕೇಂದ್ರಿತ ಚೌಕಟ್ಟುಗಳಲ್ಲಿ ಮಂಡಿಸುತ್ತದೆ. ಇಡಿಯ ಜಗತ್ತಿನ ಜ್ಞಾನ ಮಾದರಿಗಳನ್ನು ಪುರುಷ ಕೇಂದ್ರಿತ ಚಿಂತನೆಯ ಕ್ರಮವೇ ಆಳಿದೆಯೆಂದು ಸ್ತ್ರೀವಾದವು ಭಾವಿಸುತ್ತದೆ. ಈ ರೀತಿಯ ಪುರುಷಕೇಂದ್ರಿತ ಚಿಂತನೆಯ ಕ್ರಮವು ತನಗೆ ಬೇಕಾದ ಮಾನದಂಡವನ್ನು ಇಟ್ಟು, ಇದು ಸಮಾಜಕ್ಕೆ ಬೇಕು; ಇದು ಸಮಾಜಕ್ಕೆ ಬೇಡವೆಂದು ಹೇಳುತ್ತಲೇ ಬಂದಿದೆ. ರಚನೋತ್ತರ ಸ್ತ್ರೀವಾದವು ಈ ರೀತಿಯಲ್ಲಿ ನಿರ್ದಿಷ್ಟಗೊಳಿಸುವ ಚಿಂತನೆಯ ಕ್ರಮವನ್ನೇ ವಿರೋಧಿಸುತ್ತದೆ.

ರಚನೋತ್ತರವಾದದಲ್ಲಿ ಭಾಷೆಯು ಚರ್ಚೆಯು ಬಳಕೆ ಬಂತಷ್ಟೆ? ನಿರಚನದಲ್ಲಿ ಭಾಷೆಯ ಚರ್ಚೆಯು ಸಂಜ್ಞಾಶಾಸ್ತ್ರದ ಜೊತೆಗೆ ನಿಕಟ ಸಂಬಂಧ ಹೊಂದಿರುವುದನ್ನು ಈ ಮೊದಲು ನೋಡಲಾಗಿದೆ. ರಚನೋತ್ತರ ಸ್ತ್ರೀವಾದವು ಭಾಷೆಯ ಚರ್ಚೆಯ ಸಂದರ್ಭದಲ್ಲಿ ತನ್ನದೇ ಆದ ನೆಲೆಗಟ್ಟಿನಲ್ಲಿ ನಿಂತು ಆಲೋಚಿಸುತ್ತದೆ. ಭಾಷೆಯೆನ್ನುವುದು ಹೇಗೆ ರೂಪುಗೊಳ್ಳುತ್ತದೆ ಎಂಬುದಕ್ಕೆ ಸ್ತ್ರೀವಾದಿ ನಿರಚನವಾದಿಗಳು ಉತ್ತರಿಸುತ್ತಾರೆ. ಮಗುವು ಮೊದಲಿಗೆ ಭಾಷೆಯನ್ನು ಗ್ರಹಿಸುವುದು ತಾಯಿಯ ಮೂಲಕವೇ ಹೊರತು ತಂದೆಯ ಮೂಲಕ ಅಲ್ಲ. ಮೊದಲ ಹಂತದಲ್ಲಿ ಮಗುವಿಗೆ ತಾಯಿಯನ್ನು ಹೊರತುಪಡಿಸಿದ ಪ್ರತ್ಯೇಕ ಅನನ್ಯತೆಯೆಂಬುದು ಇರುವುದಿಲ್ಲ. ಒಂದು ಮಗುವು ಭಾಷೆಯನ್ನು ಕಲಿಯುವ ಪೂರ್ವದಲ್ಲಿ ತನ್ನ ಅನುಭವಗಳನ್ನು ಗ್ರಹಿಸುವುದು ಮತ್ತು ವ್ಯಕ್ತಪಡಿಸುವುದು ತಾಯಿಯ ಮೂಲಕವೇ. ಹಾಗೆ ನೋಡಿದರೆ ಒಂದು ಪುಟ್ಟ ಮಗು ಜಗತ್ತಿನೊಡಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದು ಕೂಡ. ಕಲ್ಪನೆಯ ಮೂಲಕವೇ ಹೊರತು ಇನ್ನಾವುದೇ ಬೇರೆ ಅಂಶಗಳ ಮೂಲಕ ಅಲ್ಲ. ಒಂದು ಪುಟ್ಟ ಮಗುವಿನ ಭಾಷೆ ; ಅದರ ಕಲ್ಪನೆಗಳು ಅದು ವ್ಯಕ್ತಪಡಿಸುವ ಬಯಕೆಗಳ ಸ್ವರೂಪ, ದೊಡ್ಡವರ ಕಲಿತ ಭಾಷೆಯ ಕ್ರಮದ ರೀತಿಯಲ್ಲಿ ಇರುವುದಿಲ್ಲ. ಯಾಕೆ ಹೀಗೆ ? ತಾಯಿಯ ಜೊತೆಗೆ ತೀರಾ ನಿಕಟವಾದ ಸಂಬಂಧ ಇರುವಾಗ ಮಗುವಿಗೆ ಭಾಷೆಯ ಬಗೆಗೆ ಆಸಕ್ತಿಯೇ ಇರುವುದಿಲ್ಲ. ಆದರೆ ಬೆಳೆಯುತ್ತಾ ಬಂದಂತೆ, ತಾಯಿಗಿಂತ ಬೇರೆಯಾಗಿ ರೂಪುಗೊಳ್ಳುವಾಗಲೇ ಮಗುವಿಗೆ ಭಾಷೆಯು ಬೇಕಾಗುತ್ತದೆ. ತಾಯಿಯ ಕಣ್ಣಲ್ಲಿ ತನ್ನನ್ನು ಕಂಡುಕೊಳ್ಳುವ ಮಗುವು ಅನಂತರದ ಹಂತದಲ್ಲಿ ತನ್ನ ಅನನ್ಯತೆಯನ್ನು

ಪ್ರತ್ಯೇಕವಾಗಿ ರೂಪಿಸಿಕೊಳ್ಳುತ್ತದೆ. ಈಗಾಗಲೇ ಅಸ್ತಿತ್ವದಲ್ಲಿ ಇರುವ ಭಾಷೆಯ ನಿಯಮವೆಂದರೆ ಅದು ಮತ್ತೆ ಪಿತೃರೂಪಿ ಸಂಸ್ಕೃತಿಯು ರೂಪಿಸಿರುವ ಭಾಷಿಕ ನಿಯಮ ಅಷ್ಟೆ.

ಮಗುವಿನ ಮೊದಲ ಹಂತದಲ್ಲಿ ಅದರ ಪ್ರತ್ಯೇಕವಾದ ಅನನ್ಯತೆಯೆನ್ನುವುದು ಇರುವುದಿಲ್ಲ ಎಂದೆ. ಮಗುವಿನ ಸಂವೇದನೆಯು ರೂಪುಗೊಳ್ಳುವುದು ತಾಯಿಯ ಮೂಲಕ. ಸಂಜ್ಞೆಗಳನ್ನು -ಅನಂತರ ಭಾಷೆಯ ಸಂಕೇತವನ್ನು ಕಲಿಯುತ್ತದೆ. ತಾಯಿಯ ಮೊಲೆ ಹಾಲನ್ನು ಕುಡಿಯುವ ಮೊದಮೊದಲಿಗೆ ಮಗುವು ತಾಯಿಯ ಮೊಲೆ: ತಾಯಿಯ ಸ್ಪರ್ಶ : ತಾಯಿಯ ಜೋಗುಳ: ತಾಯಿಯ ಭಾಷೆಯನ್ನು ಕಲಿಯ ತೊಡಗುತ್ತದೆ. ಈ ಕಾರಣಕ್ಕಾಗಿಯೇ ನಮ್ಮ 'ಮಾತೃ ಭಾಷೆ'ಯೆಂಬ ಪರಿಕಲ್ಪನೆಯುಂಟಾಗಿದೆ. ಆದರೆ ಮಾತೃಭಾಷೆಯೆಂಬುದು ಶುದ್ಧ ಮಾತೃಭಾಷೆಯ ಇರುವು ಪ್ರಶ್ನಾರ್ಹ. ತಾಯಿಯ ಮೂಲಕ ಕಲಿಯುವ ಅಥವಾ ಅವಳ ಸ್ಪರ್ಶದಿಂದ ಪಡೆಯುವ ಅನೇಕ ಸಂಜ್ಞೆಗಳನ್ನು ಮಗುವು ಮೊದಮೊದಲಿಗೆ ಒಂದು ನಿಯಮದೊಳಗಡಗೆ ಇಡುವ ಪ್ರಯತ್ನ ಮಾಡುತ್ತದೆ. ಈ ದೃಷ್ಟಿಯಿಂದ ಭಾಷೆಯ ಎಲ್ಲಾ ನಿಯಮಗಳು ಸಾಂಜ್ಞಿಕ ಅರ್ಥವಂತಿಕೆಗಳೇ ಹೊರತು ಮತ್ತೇನೂ ಅಲ್ಲ. ಭಾಷೆಯ ಸಾಂಜ್ಞಿಕ ರೂಪಗಳು ತಾಯಿಯ ಮೂಲಕ ಮಗುವಿಗೆ ಬರುತ್ತದೆಯೆಂದು ಹೇಳುವಾಗ - ಇಲ್ಲಿ ಸಂವೇದನೆಯು ರೂಪುಗೊಳ್ಳುವ ಪ್ರಕ್ರಿಯೆಗಳೇ ಮುಖ್ಯವಾಗಿರುತ್ತವೆ.

ಮಗುವು ತನ್ನ ತಾಯಿ ಮತ್ತು ಬೇರೆಯವರನ್ನು ಗುರುತಿಸುವ ಮೂಲಕ ಕೆಲವು ರೀತಿಯ ಭಿನ್ನತೆಗಳನ್ನು ಮೊದಲಿಗೆ ಮಾಡಿಕೊಳ್ಳುತ್ತದೆ. ತನಗೂ ಜಗತ್ತಿಗೂ ಇರುವ ಸಂಬಂಧ ಸ್ಥಾಪಿಸಿಕೊಳ್ಳಲು ಯತ್ನಿಸುತ್ತದೆ. ಈ ರೀತಿಯ ಯತ್ನವೇ ಮಗುವಿಗೆ ಕೆಲವು ರೀತಿಯ ಪರಿಕಲ್ಪನೆಯಗಳನ್ನು ಒದಗಿಸುತ್ತದೆ. - ಈ ದೃಷ್ಟಿಯಿಂದ ಸಾಂಜ್ಞಿಕ ಸ್ವರೂಪವೆನ್ನುವುದಕ್ಕೆ ಯಾವುದೇ ರೀತಿಯ ಲಿಂಗ ವೈದೃಶ್ಯವೆನ್ನುವುದು ಇರುವುದಿಲ್ಲ. ಹೀಗಾಗಿ ಒಂದು ಭಾಷೆಯ ಚೌಕಟ್ಟಿನಲ್ಲಿ ಸೂಚಿತವಾದ ವಿಷಯವಷ್ಟೇ ನಿರಚನ ದೃಷ್ಟಿಕೋನದ ಸ್ತ್ರೀವಾದಿಗಳಿಗೆ ಮುಖ್ಯವಾಗುವುದಿಲ್ಲ. ಪರ್ಯಾಯವಾದ ದೃಷ್ಟಿಕೋನವು ಭಾಷೆಯಲ್ಲಿ ಬೇಕೆಂದು ಅವರು ಹೇಳುತ್ತಾರೆ. ಹಾಗೆ ನೋಡಿದರೆ ವಿಜ್ಞಾನದ ಭಾಷೆ; ಗಣಿತ ಭಾಷೆಯೆನ್ನುವುದನ್ನು ಅದರ ಅಸ್ತಿತ್ವವನ್ನು ಬೇರೊಂದು ರೀತಿಯಲ್ಲಿ ನೋಡುತ್ತದೆ. ವಿಜ್ಞಾನದ ಭಾಷೆಯಲ್ಲಿ ಯಾವುದೇ ರೀತಿಯ ಬಹುತ್ವವಿಲ್ಲ. ಅದಕ್ಕೆ ಬಹಳ ನಿರ್ದಿಷ್ಟ ಅರ್ಥವಂತಿಕೆಯಿರುತ್ತದೆ. ಆದರೆ ಕಾವ್ಯದ ಭಾಷೆಯೆನ್ನುವುದು ಹಾಗಲ್ಲ. ಅದು ಅನಿರ್ದಿಷ್ಟ. ಹೀಗಾಗಿಯೇ ಕಾವ್ಯದಲ್ಲಿ ಭಾಷೆಗೆ ಅನೇಕ ಬಾಗಿಲುಗಳಿವೆ. ಅನೇಕ ಅರ್ಥವಂತಿಕೆಗಳಿವೆ ಮತ್ತು ಯಾವುದೇ ರೀತಿಯ ನಿಯಂತ್ರಣಗಳಿಲ್ಲ. ಸಾಹಿತ್ಯ ಕೃತಿಯಲ್ಲಿ ರೂಪುತಳೆಯುವ ಭಾಷೆಗೆ ಬಹುತ್ವವಿರುವುದರಿಂದಲೇ ಅದಕ್ಕೆ ಏಕಕೇಂದ್ರಿತವಾದ ಚೌಕಟ್ಟನ್ನು ಆರೋಪಿಸುವುದು ಸರಿಯೆನಿಸದು.

ಸಾಹಿತ್ಯ ಕೃತಿಯೊಂದರ ಭಾಷೆಗೂ ಲೇಖಕಿಯ ದೇಹ ಮತ್ತು ಮನಸ್ಸಿಗೂ ಸಂಬಂಧವಿರುತ್ತದೆ. ಅಂದರೆ ಸ್ತ್ರೀಯೊಬ್ಬಳ ವ್ಯಕ್ತಿತ್ವ: ನಿರ್ದಿಷ್ಟ ಆಲೋಚನಾ ಕ್ರಮ ಮುಂತಾದವುಗಳಿಗೂ ಬರವಣಿಗೆಗೂ ಸಂಬಂಧವಿರುತ್ತದೆ. ಇದರರ್ಥ ಬರವಣಿಗೆಯೆನ್ನುವುದನ್ನು ಪ್ರಜ್ಞೆಯು ರೂಪಿಸುತ್ತದೆಯೆಂದಲ್ಲ. ಪ್ರಜ್ಞೆ ಮತ್ತು ಸುಪ್ತಪ್ರಜ್ಞೆಗೆ ಒಂದು ರೀತಿಯ ಸಂವಾದವಿರುತ್ತದೆ. ಈ ಕುರಿತು ಮಾತಾಡುವಾಗ ಜೂಲಿಯಾ ಕ್ರಿಸ್ಟೇವಾ ಈ ರೀತಿಯಲ್ಲಿ ಹೇಳುತ್ತಾರೆ.'ನಾನು ಯಾವುದನ್ನು ಇಷ್ಟಪಡುತ್ತೇನೋ ಅದನ್ನು ಹೇಳುತ್ತೇನೆ ಎನ್ನುವುದು ಸುಪ್ತ ಪ್ರಜ್ಞೆಯ ಬಯಕೆಗಳನ್ನು ಸೂಚಿಸುತ್ತಿದ್ದರೆ. ನಾನು ಹೇಳುವುದು ನಿಮಗೆ ಎನ್ನುವುದು ಸಾಮಾಜಿಕತೆಯ ಅರಿವನ್ನು ಸೂಚಿಸುತ್ತದೆ'. ಹೀಗಾಗಿ ಸುಪ್ತಪ್ರಜ್ಞೆ ಮತ್ತು ಸಾಮಾಜಿಕ ರೂಪಗಳ ನಡುವೆ ಭಾಷೆಯಿರುತ್ತದೆ ಮತ್ತು ಭಾಷೆಯೆನ್ನುವುದು ಸದಾ ಚಲನಶೀಲವಾಗಿರುತ್ತದೆ. ಹಾಗೆ

ಚಲನಶೀಲವಾಗಿರುವುದರಿಂದಲೇ ಭಾಷೆಗೆ ಬಹುತ್ವವಿರುತ್ತದೆ . ಮತ್ತು ಭಾಷೆಯ ಅನನ್ಯತೆಯನ್ನು ಯಾವತ್ತೂ ನಿರ್ದಿಷ್ಟಗೊಳಿಸಲು ಬರುವುದಿಲ್ಲ ಮತ್ತು ಜೊತೆಗೆ ಅರ್ಥವನ್ನು ಒಂದಡೆಗೆ ನಿಲ್ಲಿಸಿ ಮುಕ್ತಾಯಗೊಳಿಸುವಂತೆಯೂ ಇಲ್ಲ. ಭಾಷೆಯ ಮುಖಾಂತರ ವೈಯಕ್ತಿಕವಾಗಿರುವ ಸಂಗತಿಗಳ ಆಚೆಗೆ ಉಳಿದ ನಿರಚನವಾದಿಗಳಂತೆ ಸ್ತ್ರೀವಾದಿಗಳಿಗೂ ಆಸಕ್ತಿಯಿದೆ. ಈ ಕಾರಣದಿಂದಲೇ ಸ್ತ್ರೀವಾದಿಗಳು ಸಂಜ್ಞಾಶಾಸ್ತ್ರವನ್ನು ಆಶ್ರಯಿಸುತ್ತಾರೆ.

ಸ್ತ್ರೀವಾದಿಗಳೂ ಕೂಡಾ ಅಂತರ್ ಪಠ್ಯದ ಪರಿಕಲ್ಪನೆಯನ್ನು ನಮ್ಮ ಮುಂದಿಡುತ್ತಾರೆ. ಅಂತರ್ ಪಠ್ಯವು ಅನೇಕ ನಿಜಗಳನ್ನು ವ್ಯಕ್ತಪಡಿರುವ ಒಂದು ಮಾಧ್ಯಮವೆಂದು ಅವರು ತಿಳಿಯುತ್ತಾರೆ.

ಭಾಷೆ, ಅಧಿಕಾರ, ಗಂಡು - ಹೆಣ್ಣಿನ ಸಂಬಂಧ ಮುಂತಾದವುಗಳನ್ನು ಚಾರಿತ್ರಿಕವಾಗಿ ಒಂದೆಡೆಗೆ ನಿರ್ದಿಷ್ಟಗೊಳಿಸುವುದರಿಂದ ಸ್ತ್ರೀವಾದಕ್ಕೆ ಇತಿ ಮಿತಿ ಹೇರಿದಂತೆ ಎಂದು ನಿರಚನವಾದಿಗಳು ಹೇಳುತ್ತಾರೆ. ಪಿತೃರೂಪಿ ಸಂಸ್ಕೃತಿಯು ಹೇರಿದ ತರ್ಕವನ್ನು ಈ ಕಾರಣದಿಂದ ವಿರೋಧಿಸುತ್ತಾರೆ ಕೂಡಾ. ಸ್ತ್ರೀತ್ವ ಸ್ತ್ರೀ ಲೇಖಕ ಬರವಣಿಗೆ, ಮುಂತಾದವುಗಳನ್ನು ನಿರಚನವಾದದ ಸ್ತ್ರೀವಾದವು ಈ ಕಾರಣಕ್ಕೆ ಪ್ರಶ್ನಿಸುತ್ತದೆ ಕೂಡಾ.

## ಅಧ್ಯಾಯ-8

# ನಿರಚನ ಸಿದ್ಧಾಂತವು ತತ್ತ್ವಜ್ಞಾನವೇ - ಸಾಹಿತ್ಯ ಚರ್ಚೆಯೆ ?

ಈಗಾಗಲೇ ನಾವು ಪರಿಶೀಲಿಸಿರುವಂತೆ ಅಥವಾ ಈಗಾಗಲೇ ನಾವು ನಿರಚನ ಸಿದ್ಧಾಂತವನ್ನು 'ಓದಿರುವಂತೆ' ನಿರಚನ ಸಿದ್ಧಾಂತ ಎನ್ನುವುದು ಕೇವಲ ಒಂದು ಮಾದರಿಯಲ್ಲ ಅಥವಾ ಅದು ಒಂದು ತಾಂತ್ರಿಕ ವಿವರಣೆಯೂ ಅಲ್ಲ. ಹಾಗೆಯೇ ಕಾಲ್‌ರಿಜ್ ಅಥವಾ ಎಲಿಯಟ್‌ನಂತೆ ಕೇವಲ ಪಠ್ಯಕೇಂದ್ರಿತ ವಿಮರ್ಶೆಯ ಪದ್ಧತಿಯೂ ಅಲ್ಲ. ಕನ್ನಡದಲ್ಲಿಯೂ ಅಷ್ಟೆ: ಗಿರಡ್ಡಿ ಗೋವಿಂದರಾಜ ಅಥವಾ ಜಿ.ಎಚ್. ನಾಯಕ ಮೊದಲಾದವರು ಬರೆದಿರುವ ನವ್ಯ ವಿಮರ್ಶೆಯ ಮಾದರಿಯಲ್ಲ. ನಮ್ಮಲ್ಲಿ ಅನೇಕ ವಿಮರ್ಶಕರು ಸಾಹಿತ್ಯವನ್ನು ಓದುವಾಗ ಅದರ ಮುದ್ರಿತರೂಪವನ್ನು ಆಧರಿಸಿಕೊಂಡು ಒಂದು ಕೃತಿಯಲ್ಲಿ ಬಂದಿರುವ ವಸ್ತುವೆಂದರೆ ಇದು, ಅಥವಾ ಒಂದು ಕೃತಿಯ 'ಆಶಯ' ವೆಂದರೆ ಇದು ಎಂದು ಸಾಹಿತ್ಯ ಓದುಗರಿಗೆ ನಿರ್ದಿಷ್ಟವಾದ ನಿರ್ದೇಶನವನ್ನು ಮಾಡಿದರು. ಆ ಮೂಲಕವಾಗಿ ಸಾಹಿತ್ಯದ ಓದಿನ ಬಗ್ಗೆ; ನಿರ್ದಿಷ್ಟ ರೂಪದ ಬಗೆಗೆ ಓದುಗರಲ್ಲಿ ಒಂದು ಅಭಿಪ್ರಾಯವನ್ನು ಹೇರಿದರು. ಆದರೆ ನಿರಚನ ಸಿದ್ಧಾಂತದ 'ಉದ್ದೇಶವು ಅರ್ಥವತ್ತಾದ ಅರ್ಥಗ್ರಹಿಕೆಯನ್ನು; ಒಂದು ಕೃತಿಯ ಬಗ್ಗೆ ಹೊಸ ವಿಷಯಗಳನ್ನು ಸಾದರಪಡಿಸಲು ಪ್ರಯತ್ನಿಸುತ್ತದೆ. ಈ ಅರ್ಥವನ್ನು ತೆಗೆದುಕೊಂಡರೆ ನಿರಚನ ಸಿದ್ಧಾಂತಕ್ಕೆ ಅದರದೇ ಆದ ಮಾದರಿಗಳಿವೆ. ಅದು ತನ್ನ ಹಿಂದಿನ ಮಾದರಿಗಳನ್ನು ಬಿಟ್ಟು ಸಾಹಿತ್ಯದ ನೆಲೆಯ ಬಗ್ಗೆ ಹೊಸ ನೆಲೆಗಳನ್ನು ಹುಡುಕಲು ಯತ್ನಿಸುತ್ತದೆ. ಒಟ್ಟಿನಲ್ಲಿ ನಿರಚನ ಸಿದ್ಧಾಂತ ಒಂದು ಕೃತಿಯನ್ನು ತಪ್ಪಾಗಿ ಓದುವುದನ್ನು ಅಲ್ಲಗಳೆಯುವುದರ ಮೂಲಕ ತನ್ನ ಅನನ್ಯತೆಯನ್ನು ಸ್ಥಾಪಿಸಿಕೊಂಡಿದೆ.

ಸಾಮಾನ್ಯವಾಗಿ ಸಾಹಿತ್ಯ ವಿಮರ್ಶೆಯ ಸಿದ್ಧಾಂತಗಳೆಂದರೆ ಅವು ನಿರ್ದಿಷ್ಟ ಮಾದರಿಯನ್ನು ಒಳಗೊಂಡಿರುವುದು; ಅಷ್ಟೇ ಅಲ್ಲ. ನಿರ್ದಿಷ್ಟ ರೂಪುರೇಷೆಯನ್ನು ; ಸೂತ್ರಗಳನ್ನು ಒಳಗೊಂಡಿರುತ್ತವೆ. ಉದಾಹರಣೆಗೆ ರಚನಾವಾದವು ಒಂದು ಕೃತಿಯ ರಚನೆಯನ್ನು ಅನನ್ಯವೆಂದು ಭಾವಿಸಿಕೊಂಡಂತೆ; ಪ್ರಾಯೋಗಿಕ ವಿಮರ್ಶೆಯು ಒಂದು ಸಾಲಿನ ಶಬ್ದಸಾಕ್ಷ್ಯವನ್ನು ಪ್ರಧಾನವೆಂದು ಅಂಗೀಕರಿಸಿಕೊಂಡಿರುತ್ತದೆ. ನಿರಚನ ಸಿದ್ಧಾಂತವು ಈ ರೀತಿಯ ಮಾದರಿಯ ಅಥವಾ ಸಿದ್ಧಸೂತ್ರಗಳ ಮೂಲಕ ಸಾಹಿತ್ಯವನ್ನು ಗ್ರಹಿಸುವ ನೆಲೆಗಳನ್ನು ನಿರಾಕರಿಸುತ್ತದೆ. ಹಾಗೆಯೇ ರಚನಾವಾದವು ಎತ್ತಿಹಿಡಿದ ಪರಿಕಲ್ಪನಾತ್ಮಕ ದ್ವಂದ್ವಗಳನ್ನು ಕೂಡ ವಿರೋಧಿಸುತ್ತದೆ. ಬೇರೆ ಬೇರೆ ದ್ವಂದ್ವಗಳ ಪ್ರಭುತ್ವವನ್ನು ಅವನತಿಗೊಳಿಸುವುದು ನಿರಚನ ಸಿದ್ಧಾಂತದ ಮುಖ್ಯ ನೆಲೆಯಾಗಿದೆ. ಒಂದು ಪಠ್ಯದ ವಿಭಿನ್ನ ಸೂಚನೆಗಳನ್ನು ನಿರಚನ ಸಿದ್ಧಾಂತವು ಹುಡುಕುತ್ತದೆ. ಒಂದು ಪಠ್ಯದಲ್ಲಿ ಬರುವ ಸೂಚನೆಗಳನ್ನು ವಿಭಿನ್ನ ಅನುಕ್ರಮತೆ (different order) ಮೂಲಕ ಅದು ಪರಿಭಾವಿಸಲು ಯತ್ನಿಸುತ್ತದೆ. ನಿರಚನ ಸಿದ್ಧಾಂತದ ಪ್ರಕಾರ ಪ್ರತಿಯೊಂದು ಪಠ್ಯವು ಸ್ವ-ವಿರೋಧಗಳನ್ನು ( Self-contradiction) ಒಳಗೊಂಡಿರುವುದಲ್ಲದೆ, ಪ್ರತಿಯೊಂದು ಪಠ್ಯದಲ್ಲಿಯೂ ತಾರ್ಕಿಕತೆ ( logic) ಮತ್ತು ಆಕರ್ಷಕ ನಿಲುವು (Rhetoric) ಗಳ ಮಧ್ಯೆ ಘರ್ಷಣೆ ಇರುತ್ತದೆ. ಈ ಘರ್ಷಣೆಯನ್ನು ಪಠ್ಯವು ತಾನೇ ಸ್ವತ: ತೆರೆದಿಡುತ್ತದೆ. ಅಷ್ಟೇ ಅಲ್ಲದೆ ಯಾವುದನ್ನು ಒಂದು ಪಠ್ಯವು ಹೇಳಲು ಉದ್ದೇಶಿಸಿದೆ ಮತ್ತು ಯಾವುದನ್ನು ಅದು ಹೇಳದೆ ಉಳಿಸಿಕೊಂಡಿದೆಯೆಂಬುದನ್ನು ನಿರಚನ ಸಿದ್ಧಾಂತವು ತನ್ನ ಗಮನದಲ್ಲಿ ತೆಗೆದುಕೊಳ್ಳುತ್ತದೆ.

ಉದಾಹರಣೆಗೆ ಅಕ್ಕನ ವಚನವೊಂದನ್ನು :

"ಒಮ್ಮೆ ಕಾಮನ ಕಾಲಹಿಡಿವೆ,
ಒಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ!
ಸುಡು ವಿರಹವನ್ನು : ಆರಿಗೆ ಧೃತಿಗೆಡುವೆ ?
ಚನ್ನಮಲ್ಲಿಕಾರ್ಜುನ ದೇವನೆನ್ನನೊಲ್ಲದ ಕಾರಣ
ಎಲ್ಲರಿಗೆ ಹಂಗಿತಿಯಾದೆ ನವ್ವ !"

(ಡಾ. ಎಲ್. ಬಸವರಾಜ ಅವರು ಸಂಪಾದಿಸಿಕೊಟ್ಟ 'ಅಕ್ಕನ ವಚನಗಳು' ಗ್ರಂಥದಿಂದ ಆಯ್ಕೆ ಮಾಡಿಕೊಂಡ ವಚನವಿದು,) ಪಾಠಾಂತರದ ಪ್ರಕಾರ ಈ ವಚನವು ಕೆಲವು ಬದಲಾವಣೆಗಳನ್ನು ಒಳಗೊಂಡಿದೆ.

' ಒಮ್ಮೆ ಕಾಮನ ಕಾಲಹಿಡಿವೆ,
ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ.
ಸುಡಲೀ ವಿರಹವ ನಾನಾರಿಗೆ ಧೃತಿಗೆಡುವೆ?
ಚನ್ನಮಲ್ಲಿಕಾರ್ಜುನ ದೇವ ನೆನ್ನನೊಲ್ಲಕಾರಣ
ಎಲ್ಲರಿಗೆ ಹಂಗುಗಿತ್ತಿಯಾದೆನವ್ವಾ'

ಈ ಪಾಠಾಂತರಗಳು ಶಾಬ್ದಿಕ ಸಂಯೋಜನೆಯಲ್ಲಿ ಭಿನ್ನತೆಯನ್ನು ಇಟ್ಟುಕೊಂಡಿವೆ ಎನ್ನುವುದು ಗಮನಾರ್ಹ. ಪದ ಸಂಯೋಜನೆಯಲ್ಲಿನ ಬದಲಾವಣೆಯು, ಅರ್ಥ ಗ್ರಹಿಕೆಯ ದೃಷ್ಟಿಯಿಂದ ಭಿನ್ನತೆಗಳನ್ನು ಸೃಷ್ಟಿಸುತ್ತವೆ. ಈ ವಚನವು ಒಮ್ಮೆ ಕಾಮನ ಕಾಲನ್ನು ಹಿಡಿಯುತ್ತೇನೆ. ಮತ್ತೊಮ್ಮೆ ಚಂದ್ರಮನಿಗೆ ಸೆರಗೊಡ್ಡಿ ಬೇಡುತ್ತೇನೆ. ಎಂಬುದನ್ನು ಬೇರೊಂದು ರೀತಿಯಿಂದ ಹೇಳುತ್ತದೆ. ಅಂದರೆ 'ವ್ಯತ್ಯಾಸ ಮತ್ತು ಭಿನ್ನ ಅನುಕ್ರಮತೆಗಳು ರೂಪುಗೊಂಡಿವೆ. 'ಒಮ್ಮೆ' 'ಕಾಮನ' 'ಕಾಲ' 'ಹಿಡಿವೆ' ಎಂದು ಹೇಳುವಲ್ಲಿನ ವ್ಯತ್ಯಾಸಗಳನ್ನು ಗಮನಿಸಬೇಕು. ಈ ಪದಗಳನ್ನು ಒಟ್ಟಾಗಿ ಇರುವಾಗ ಅರ್ಥಗಳು ಬೇರೆಯಾಗಿರುತ್ತವೆ. 'ಒಮ್ಮೆ' ಎನ್ನುವುದನ್ನು 'ಒಂದುಬಾರಿ' ಎಂಬ ಕೇವಲ ನಿಘಂಟಿನ ಅರ್ಥವನ್ನು ಮಾತ್ರವೇ ಇದು ಸೂಚಿಸುತ್ತಿಲ್ಲ. ಹೀಗಾಗಿ ಈ ವಚನದಲ್ಲಿ ಒಮ್ಮೆ ಎನ್ನುವುದು ಕೇವಲ ನಿರ್ದಿಷ್ಟವಲ್ಲ. ಅನಿರ್ದಿಷ್ಟವಾಗಿರಬಹುದು. ಕಾಲಹಿಡಿವೆ ಎನ್ನುವುದು ಕೂಡಾ ಅಷ್ಟೆ ಕೇವಲ ಕ್ರಿಯೆಯನ್ನು ಸೂಚಿಸುತ್ತಿಲ್ಲ. ಇವರಿಂದಾಗಿ ವಿಭಿನ್ನತೆಗಳು ಸಾಧ್ಯವಾಗುತ್ತವೆ. ಚೆನ್ನಮಲ್ಲಿಕಾರ್ಜುನನು ಎನ್ನನೊಲ್ಲದ ಕಾರಣ, ಎನ್ನುವಲ್ಲಿ ಈ ರೀತಿಯ ಭಿನ್ನತೆಗಳು ರೂಪುಗೊಂಡಿರುವುದನ್ನು ಕಾಣುತ್ತೇವೆ.

ಇಲ್ಲಿರುವ ತರ್ಕ ಮತ್ತು ಆಕರ್ಷಕ ಪದಗಳ ಸಂಯೋಜನೆಯ ನಡುವಣ ಘರ್ಷಣೆಯನ್ನು ಗಮನಿಸಿ : 'ಚೆನ್ನಮಲ್ಲಿಕಾರ್ಜುನನು ಎನ್ನನೊಲ್ಲದ ಕಾರಣ ಎಲ್ಲರಿಗೂ ಹಂಗುಗಿತ್ತಿಯಾದೆನವ್ವಾ' ಎನ್ನುವುದು ತರ್ಕ. ಆದರೆ ಈ ತರ್ಕವನ್ನು ಆಕರ್ಷಕ ಪದ-ನಿಲುವುಗಳು ಬೇರೆಯಾಗಿರಿಸುತ್ತವೆ. ಈ ವಚನವು ಹೇಳಲು ಉದ್ದೇಶಿಸಿದ್ದು ಇದನ್ನೆ. ಆದರೆ ಹೇಳದೆ ಉಳಿಸಿದ್ದು? ಅಕ್ಕಮಹಾದೇವಿಗೂ ಚೆನ್ನಮಲ್ಲಿಕಾರ್ಜುನನಿಗೂ ಯಾವ ಬಗೆಯ ಸಂಬಂಧ? ಯಾಕೆ ಈ ಮಾತನ್ನು ಹಾಗೆಯೇ ವಚನ ಕಾರ್ತಿ ಉಳಿಸಿಕೊಂಡಿದ್ದಾಳೆ ? ಇತ್ಯಾದಿ. ಅದು ಹೇಳದೆ ಉಳಿಸಿಕೊಂಡಿದೆಯೆಂಬುವನ್ನು ನಿರಚನ ಸಿದ್ಧಾಂತವು ತನ್ನ ಗಮನಕ್ಕೆ ತೆಗೆದುಕೊಳ್ಳುತ್ತದೆ.

ವಾಸ್ತವವಾಗಿ ನಿರಚನ ಸಿದ್ಧಾಂತದ ಪ್ರಮುಖ ಆಸಕ್ತಿಯು ಈ ತರಹದಲ್ಲಿರುತ್ತದೆಯೆಂದು ಹೇಳಬಹುದು. ಒಂದು ಪಠ್ಯವೇ ಎಲ್ಲವನ್ನು ಹೇಳುತ್ತದೆಯೆಂದು ಪರಿಭಾವಿಸುವುದಿಲ್ಲ. ಅದು

**ಹೇಳದೇ ಇರಬಹುದಾದ ಸಂಗತಿಗಳೂ ಇರುತ್ತದೆ.** ಇಲ್ಲಿ ನೀಶೆಯ ತತ್ತ್ವಜ್ಞಾನವನ್ನು ನಾವು ನೆನಪಿಸಿಕೊಳ್ಳಬಹುದು.

ಬರವಣಿಗೆಯ ಒಂದು ಘಟಕವನ್ನೇ ಬೇಕಾದರೆ ಪರಿಗಣಿಸಬಹುದು. ಯಾವುದೇ ಒಂದು ಪತ್ರಿಕೆಯಲ್ಲಿ ಒಂದು ಸುದ್ದಿಯು ಹೀಗೆ ಪ್ರಕಟವಾಗಿದೆ 'ಜಮ್ಮುವಿನಲ್ಲಿ ಬಾಂಬ್‌ಸ್ಫೋಟ', 'ಹಿರಿಯ ರಾಜಕೀಯ ಮುತ್ಸದ್ಧಿಯೊಬ್ಬರಿಗೆ ಗಾಯ' 'ಕೆಲವರು ಸತ್ತಿದ್ದಾರೆ'. ಈ ರೀತಿಯ ಮಾತುಗಳ ಘಟಕಗಳಲ್ಲಿ 'ಸತ್ಯ'ವು ಮಾರು ದೂರ ಇರಬಹುದು. ಕೆಲವರು ಸತ್ತಿದ್ದಾರೆಂಬುದರಲ್ಲಿ 'ಈ ಕೆಲವರು' ಯಾರೆಂಬುದು ಸ್ಪಷ್ಟವಿರುವುದಿಲ್ಲ. ಹೀಗಾಗಿ ಈ ವರದಿಯ ತುಣುಕು ಹೇಳುವ ಸತ್ಯವು ಅಸ್ಪಷ್ಟ. ಇದನ್ನೇ ಒಂದು ಪದ್ಯದ ಸಾಲಿಗೂ ಅನ್ವಯಿಸಬಹುದು.

ನೀ ಹೀಂಗ ನೋಡಬ್ಯಾಡ ನನ್ನ
ನೀ ಹೀಂಗ ನೋಡಿದರೆ ನನ್ನ
ನಾ ಹ್ಯಾಂಗ ನೋಡಲೇ ನಿನ್ನ?

'ನೋಡಬ್ಯಾಡ' ಎನ್ನುವುದು ನಿರ್ದೇಶನಾತ್ಮಕವಾಗಿದ್ದರೂ ಯಾವಾಗ, ಯಾತಕ್ಕೆ, ಎಂಬುದು ಅಸ್ಪಷ್ಟ. ಮುಂದಿನ ಸಾಲುಗಳನ್ನು ಓದಿದರೂ ಇದು ನಿರ್ದಿಷ್ಟವಾದ ಸತ್ಯವನ್ನು ಹೇಳುತ್ತದೆ ಎಂದು ನಂಬಲಾಗದು. 'ಸತ್ಯ' ವೆನ್ನುವುದೇ ಈ ಕಾರಣದಿಂದ ಸಂವಾದಿಯಾದ ಪದವಾಗಿದೆ.

**ಒಂದು ಪದ್ಯಭಾಗದಲ್ಲಿ ಬರುವ ರೂಪಕಗಳು, ಅದಕ್ಕೆ ಕೊಡಲಾಗಿರುವ ಅಡಿ ಟಿಪ್ಪಣಿಗಳು ಒಬ್ಬ ಓದುಗನಿಗೆ ಸಹಾಯ ಮಾಡುತ್ತದೆಯೆಂದು ನಿರಚನ ಸಿದ್ಧಾಂತವು ನಂಬುತ್ತದೆ.** ಈಗಾಗಲೇ ನಿರ್ಣಯಗೊಳಿಸಲ್ಪಟ್ಟ ಪಠ್ಯವೆಂಬ ತೀರ್ಮಾನವು ನಿರಚನ ಸಿದ್ಧಾಂತಕ್ಕೆ ಇಲ್ಲ. ಯಾವುದೇ ಪಠ್ಯದ ಕುರಿತ ಮೌಲ್ಯಮಾಪನವು ಈಗಾಗಲೇ ತೀರ್ಪಿಗೆ ಒಳಗಾಗಿದೆ ಎನ್ನುವ ಭಾವನೆಯನ್ನು ನಿರಚನ ಸಿದ್ಧಾಂತವು ನಿರಾಕರಿಸುತ್ತದೆ. ಅನೇಕ ಸಂಗತಿಗಳು ಒಂದು ಪಠ್ಯದ ಸಂದರ್ಭದಲ್ಲಿ ತೀರ್ಮಾನಕ್ಕೆ ಒಳಗಾಗದೇ ಇರಬಹುದು. ಅದರ ಬಗ್ಗೆ ಸಿದ್ಧಾಂತಕ್ಕೆ ಆಸಕ್ತಿಯಿದೆ.

ಒಂದು ಪಠ್ಯದಲ್ಲಿ ಬರುವ ಪರಿಕಲ್ಪನೆಗಳಿಗೆ ಕೆಲವು ಅರ್ಥಗಳಿವೆ ಎಂದುಕೊಳ್ಳೋಣ ಒಂದೊಂದು ಪದಕ್ಕೂ ಒಂದೊಂದು ಬೇರುಗಳಿದ್ದು ಅದು ತನ್ನ ಮೂಲ ರೂಪವನ್ನು ಬದಲಾಯಿಸಿಕೊಂಡಿರುತ್ತದೆ. ಪ್ರತಿಯೊಂದು ಪಠ್ಯದಲ್ಲಿ ಬರುವ ಪ್ರತಿಯೊಂದು ಪದಕ್ಕೂ ಸ್ವ-ಅನನ್ಯತೆಯಿರುತ್ತದೆ. ನಿರಚನದ ಪ್ರಕಾರ, ಈ ಎಲ್ಲಾ ಪರಿಕಲ್ಪನೆಯೂ ವ್ಯಾಖ್ಯಾನಕ್ಕೆ ದಕ್ಕುತ್ತದೆ. ಪಠ್ಯ ಮತ್ತು ಅನ್ವಯಕಾರನ ನಡುವೆ ದ್ವಂದ್ವಾತ್ಮಕ ಆಟವು ಜರುಗುತ್ತದೆ.

ಸಾಹಿತ್ಯ ವಿಮರ್ಶೆಯ ಭಾಷೆ ಮತ್ತು ಸಾಹಿತ್ಯ ಪಠ್ಯದ ನಿಕಟ ಓದು ಎನ್ನುವುದರ ನಡುವೆ ನಿರಚನ ಸಿದ್ಧಾಂತವು ಒಂದು ರೇಖೆಯನ್ನು ಎಳೆಯಲು ಬಯಸುವುದಿಲ್ಲ. ಸಾಹಿತ್ಯ ವಿಮರ್ಶೆಯ ಭಾಷೆ ಎಂಬುದನ್ನು ಒಂದು ಪ್ರತ್ಯೇಕ ನೆಲೆಯಲ್ಲಿ ಕಂಡುಕೊಳ್ಳುವ ಪ್ರಕ್ರಿಯೆಯಲ್ಲ. ಈ ಮಾತನ್ನು ನಿರಚನಸಿದ್ಧಾಂತವು ಪ್ರತಿಪಾದಿಸಲು ಮುಖ್ಯ ಕಾರಣ ಈ ಸಿದ್ಧಾಂತವು ಅನ್ವಯ ಕ್ರಮವಾಗದಿರುವುದೇ ಆಗಿರುವುದರಿಂದ.

ಪರಿಕಲ್ಪನೆಗಳನ್ನು ರಚನಾವಾದಿ ಸಿದ್ಧಾಂತವು ಸರಳ ದ್ವಂದ್ವಗಳ ಮೂಲಕ ಪರಿಭಾವಿಸಿತಷ್ಟೆ? ಹಾಗೆಯೇ ಒಂದು ಕೃತಿಯ ಹಿನ್ನೆಲೆಯಲ್ಲಿ ಆಲೋಚನೆಯಿದೆ. ಈ ಆಲೋಚನೆಯೇ ಕೃತಿಯನ್ನು ರೂಪಿಸುತ್ತದೆಯೆಂಬ ಮೇಲು-ಕೀಳೆಂಬ ತಾರತಮ್ಯ ಭಾವವನ್ನು ನಿರಚನವು ಪ್ರಬಲವಾಗಿ ವಿರೋಧಿಸುತ್ತದೆ.

ಪಠ್ಯದ ಒಳಗಿನ ಸೂಚನೆಗಳನ್ನು ಬೇರೊಂದು ಅನುಕ್ರಮತೆಯಲ್ಲಿ ನಿರಚನ ಸಿದ್ಧಾಂತವು ಮಂಡಿಸುತ್ತದೆ.

ಪಶ್ಚಿಮದ ಚಿಂತನಾಕ್ರಮದಲ್ಲಿ 'ಕಾರಣ' ಮತ್ತು 'ಸಮಯ'ದ ಪರಿಕಲ್ಪನೆಯು ಇದೆಯಷ್ಟೆ? ಈ ರೀತಿಯ ಚಿಂತನಾ ಕ್ರಮದಿಂದಾಗಿ ಒಂದು ತಾತ್ತ್ವಿಕ ಆಲೋಚನೆಯ ಚೌಕಟ್ಟು ನಿರ್ಮಿತಗೊಂಡಿದೆ. ಈ ತತ್ತ್ವಜ್ಞಾನ ಆಧಾರಿತ ಚೌಕಟ್ಟು ಸಂವಹನ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರುತ್ತದೆಯೆಂದು ಅದು ನಂಬುತ್ತದೆ. ನಿರಚನ ಸಿದ್ಧಾಂತವು ಒಂದು ಪಠ್ಯ ರೂಪುಗೊಳ್ಳುವ ಸಂದರ್ಭದಲ್ಲಿ ಸ್ಥಾಪಿಸಿಕೊಳ್ಳುವ ಅಂತರವನ್ನು ಪ್ರಧಾನವಾಗಿ ಗಣನೆಗೆ ತೆಗೆದುಕೊಳ್ಳುತ್ತದೆ. ಈ ದೃಷ್ಟಿಯಿಂದ ನಿರಚನ ಸಿದ್ಧಾಂತವು ಪೂರ್ವ ಪಠ್ಯವನ್ನು ಗಣನೆಗೆ ತಂದುಕೊಂಡು ಹಳೆಯ ವಿಮರ್ಶಾಪದ್ಧತಿಗಳು ನಿರ್ಮಿಸಿಕೊಂಡ ಅರ್ಥಹಿಂಸೆಯನ್ನು ವಿರೋಧಿಸುತ್ತದೆ.

ನಿರಚನ ಸಿದ್ಧಾಂತವು ತೀರಾ ಹೊಸದನ್ನು ಅಹ್ವಾನಿಸುವುದರೊಂದಿಗೆ ಅನ್ವಯದ ಕ್ರಮವನ್ನು ಒಂದು ಪಂಥಾಹ್ವಾನವೆಂದು ಅದು ಪರಿಭಾವಿಸುತ್ತದೆ. ನಿರಚನ ಭಾಷೆ, ತತ್ತ್ವಜ್ಞಾನ, ಸಂಸ್ಕೃತಿಯನ್ನು ಆಲೋಚಿಸುತ್ತದೆಯಾದರೂ, ಅದನ್ನು ಗ್ರಹಿಸುವುದು ಬರವಣಿಗೆಯ ಮೂಲಕವೇ ಬರವಣಿಗೆಯನ್ನೇ ಮತ್ತೊಂದು ರೀತಿಯಿಂದ ಅದು ಮುಂದುವರಿಸುತ್ತದೆಯೆಂದು ಹೇಳಿದರೂ ಸರಿಯಾಗುತ್ತದೆ. ಆದರೆ, ನಿರಚನ ಸಿದ್ಧಾಂತವು 'ಅನ್ವಯದ ಸಂದರ್ಭದಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ಬಯಸುತ್ತದೆಯೆಂಬುದಂತೂ ನಿಜ'.

ನಿರಚನ ಸಿದ್ಧಾಂತವು ಒಂದು ರೀತಿಯಲ್ಲಿ ಶೈಲಿಯ ಮೇಲೆ ಪ್ರಯೋಗ ನಡೆಸುತ್ತದೆ. ಅಷ್ಟೇ ಅಲ್ಲದೆ ಈಗಾಗಲೇ ನಿರ್ಮಾಣಗೊಂಡ ತತ್ತ್ವಜ್ಞಾನ ಮತ್ತು ತತ್ತ್ವಜ್ಞಾನವಲ್ಲದ ಸಾಹಿತ್ಯವೆಂಬ ಪ್ರಭೇದವನ್ನು ಅಳಿಸಿಹಾಕುತ್ತದೆ. ನಿರಚನದ ಪ್ರಮುಖ ಚಟುವಟಿಕೆಯೇ ಇದು. ಡೆರಿಡಾನ ಪ್ರಕಾರ ತತ್ತ್ವಜ್ಞಾನವನ್ನು ಸಾಹಿತ್ಯದಿಂದ ಪ್ರತ್ಯೇಕಗೊಳಿಸುವುದು. ಅಷ್ಟೇ ಅಲ್ಲದೆ ತತ್ತ್ವಜ್ಞಾನವು ಸತ್ಯವನ್ನು ಹೇಳುತ್ತದೆ. ಅದು ಬರವಣಿಗೆಯ ರೂಪಕ್ಕೆ ಇಳಿದಾಗ ಅದಕ್ಕೆ ವಿಶೇಷ ಪ್ರಾಶಸ್ತ್ಯಕೊಡಲಾಗಿದೆ. ಬರವಣಿಗೆಯಲ್ಲಿಯೂ ತತ್ತ್ವಜ್ಞಾನವು ತನ್ನ ಸಂವಿಧಾನಕ್ಕಿಂತಲೂ ಭಿನ್ನವಾಗಿರಬಹುದು. ಇತ್ಯಾದಿ ಮಾತುಗಳಿಂದ ತತ್ತ್ವಜ್ಞಾನಕ್ಕೆ ಎತ್ತರದ ಸ್ಥಾನವನ್ನು ಕೊಡಲಗಿದೆ. ತತ್ತ್ವಜ್ಞಾನವನ್ನು ಓದುವುದೆಂದರೆ ಜಾಗರೂಕವಾಗಿ , ನಿಧಾನವಾಗಿ, ವಿವೇಕಯುತವಾಗಿ ಓದುವುದೆಂದು ಪರಿಭಾವಿಸಲಾಗಿದೆ. ಆದರೆ ಸಾಹಿತ್ಯದ ಸಂದರ್ಭದಲ್ಲಿ ಓದುವವರು ತತ್ತ್ವಜ್ಞಾನಿಗಳಲ್ಲ. ಅಷ್ಟೇ ಅಲ್ಲ 'ನಿಜವಾಗಿ' ಸಾಹಿತ್ಯವನ್ನು ವಿಮರ್ಶಕರು ಓದುತ್ತಾರೆಂದು ಪರಿಭಾವಿಸಲಾಗಿದೆ.

ಡೆರಿಡಾನ 'ನಿರಚನಸಿದ್ಧಾಂತವು ಒಂದು ಪಠ್ಯ ಒಬ್ಬರಿಂದ ಮತ್ತೊಬ್ಬರಿಗೆ ಪ್ರವಹಿಸುವುದನ್ನು ಕುರಿತು ಗಮನ ಹರಿಸಿ ಅದರ ತರ್ಕ ಮತ್ತು ಅದರ ಭಾವನೆಗಳನ್ನು ಅನ್ವಯಿಸುವಂತಿರಬೇಕು' ಎಂದು ಹೇಳುತ್ತಾನೆ. ಒಂದು ಪಠ್ಯದ ಅರ್ಥವಂತಿಕೆಯು ಮತ್ತೊಂದು ಪಠ್ಯದ ಅರ್ಥವಂತಿಕೆಯ ಜೊತೆಗೆ ಸಂಬಂಧ ಇರಿಸಿಕೊಳ್ಳುವುದನ್ನು ಗಮನಿಸಬೇಕೆಂದೂ ಪ್ರತಿಪಾದಿಸುತ್ತಾನೆ. ಒಂದು ಪಠ್ಯದ ಭಾಷೆಯ ಜೊತೆಗಿನ ಒತ್ತಡವನ್ನು ಗ್ರಹಿಸುವುದು ನಿರಚನದ ಉದ್ದೇಶವಾಗಿದೆ.

ನಿರಚನದ ಪ್ರಕಾರ ಬರವಣಿಗೆಯು ಅಂತರ್ ಪಠ್ಯವಾಗಿರುತ್ತದೆ. ಅದು ತರ್ಕವನ್ನು ಆಧರಿಸಿಕೊಂಡಿರುತ್ತದೆ. ಹಾಗೆಯೇ ಅದು ನಿರ್ದಿಷ್ಟ ವಂಶಾವಳಿಯ ಚಹರೆಯನ್ನು ಪಡೆದುಕೊಂಡಿರುತ್ತದೆ. ಹೀಗಾಗಿ ಬರವಣಿಗೆಯ ಭಾಷೆಗೆ ಅದರದೇ ಅದ ಗುಣವಿರುತ್ತದೆ. ಈ ಕಾರಣದಿಂದಲೇ ಬರವಣಿಗೆಯು ಹೊಸ ಬಗೆಯ ಅಪೇಕ್ಷೆಗಳನ್ನು ನಮ್ಮ ಮುಂದೆ ಇಡುತ್ತದೆ. ಬರವಣಿಗೆಯು ಅಪೇಕ್ಷಿಸುವ ನಿರೀಕ್ಷೆಗಳು

ಸಂವಹನಕ್ಕೂ ಸಂಬಂಧಿಸಿದೆ. ಅದು ಕೂಡಾ ಓದುಗ ಪಠ್ಯವನ್ನು ನಿಧಾನವಾಗಿ, ವಿವೇಕಯುತವಾಗಿ, ಪ್ರತ್ಯೇಕವಾಗಿ ಓದಬೇಕೆಂದು ಅಪೇಕ್ಷೆ ಪಡುತ್ತದೆ ಹೀಗಾಗಿ ನಿರಚನ ಸಿದ್ಧಾಂತವು ಓದಿನ ಚಟುವಟಿಕೆಯಾಗಿರುತ್ತದೆ. ಪಠ್ಯದ ಅನಿರ್ದಿಷ್ಟತೆಯನ್ನು ನಿರಚನ ಹುಡುಕುತ್ತದೆ. ಅದು ಸ್ವತಂತ್ರ ಓದಿನ ಪರಿಕ್ರಮ ಆಗಿರುವುದರಿಂದ ಅದಕ್ಕೆ ಯಾವುದೇ ನಿಯಮಬದ್ಧತೆ ಎಂಬುದು ಇರುವುದಿಲ್ಲ ಅರ್ಥದ ಕುಣಿತವೇ ನಿರಚನಕ್ಕೆ ಮುಖ್ಯ ಬುನಾದಿ.

ಹಾರ್ಡ್‌ಮನ್ ಒಂದು ಸಂದರ್ಭದಲ್ಲಿ ಹೇಳಿರುವಂತೆ, ಬರವಣಿಗೆಯೆನ್ನುವುದು ಬದುಕಿನ ಮತ್ತೊಂದು ಭಾಗ. ಹಾಗೆ ತಿಳಿಯುವುದು ಕೂಡಾ ಮತ್ತೊಂದು ಭಾಗವಾಗಿರುತ್ತದೆ. ಇದು ಶಾಪವೂ ಆಗಿರಬಹುದು ಅಥವಾ ಒಳ್ಳೆಯದೂ ಆಗಿರಬಹುದು.

ಪೌಲ್‌ಟ್ ಅವರ ಸಹೋದ್ಯೋಗಿಗಳು 'ವಿಮರ್ಶೆ'ಯ ಬಗ್ಗೆ ಯೋಚಿಸುವುದು ಹೀಗೆ 'ಪ್ರಾರಂಭ ಮತ್ತು ಅಂತ್ಯವು ವಿಮರ್ಶಕನ ಮತ್ತು ಬರಹಗಾರನ ಮನಸ್ಸುಗಳ ಸಹಯೋಗವನ್ನು ಸೂಚಿಸುತ್ತದೆ; ಅಷ್ಟೇ ಅಲ್ಲದೆ ವಿಮರ್ಶೆಯ ಗುರಿಯು ಕೃತಿಯ ಪುನರ್‌ಸೃಷ್ಟಿಯಾಗಿರುತ್ತದೆ. ಬರಹಗಾರನ ನಿಜವಾದ ಧ್ವನಿಯನ್ನು ಗುರುತಿಸುವುದು ವಿಮರ್ಶೆಯ ಗುರಿಯಾಗಿರುತ್ತದೆ'. ನಿರಚನ ಸಿದ್ಧಾಂತವು ಬಯಸುವುದು ಇದನ್ನು.

ಒಂದು ಸಾಹಿತ್ಯ ಕೃತಿಯನ್ನು ಅರ್ಥಮಾಡಿಕೊಳ್ಳುವುದೆಂದರೆ ಮೊದಲಿಗೆ ಅದರ ಪ್ರಾಥಮಿಕ ಅರ್ಥಗಳನ್ನು ತಿಳಿದುಕೊಳ್ಳುವುದು . ಆದರೆ ಪ್ರಾಥಮಿಕ ಅರ್ಥಗಳು ಅಷ್ಟಕ್ಕೆ ನಿಲ್ಲುವುದು ಎಂದು ಭಾವಿಸಬಾರದು. ಸಾಹಿತ್ಯವೆಂದರೆ ಕೇವಲ ಅರ್ಥಗಳ ವಸ್ತುನಿಷ್ಠ ರಚನಾಕ್ರಮವಲ್ಲ . ಒಂದು ಕವಿತೆಯ ಅಥವಾ ಒಂದು ಕಾದಂಬರಿಯ ಪದಗಳ ಮೇಲೆಯೇ ನಾವೇನೂ ನಿಲ್ಲಬೇಕಾಗಿಲ್ಲ. ಒಂದು ಸಾಹಿತ್ಯ ಕೃತಿಯಲ್ಲಿ ಬರಹಗಾರನ ಸುಪ್ತ ಪ್ರಜ್ಞೆಯು ಸಾಕ್ಷ್ಯದ ಆಧಾರವಿಲ್ಲದೆಯೂ ರೂಪು ಗೊಳ್ಳುತ್ತದೆಯೆಂದೂ ಭಾವಿಸಬೇಕಾಗಿಲ್ಲ. ಹಾಗೆಯೇ ಸಾಹಿತ್ಯದ ರಚನಾಕ್ರಮವು ನಿರ್ದಿಷ್ಟ ಸಮಾಜದ ರಚನಾಕ್ರಮದ ಜೊತೆಗೆ ನೇರ ಸಂಬಂಧ ಪಡೆದುಕೊಂಡಿದೆಯೆದಾದರು ಪಠ್ಯವನ್ನು ಅನುಭವಿಸುವುದೆಂದರೆ ಅದರ ಅರ್ಥಗಳನ್ನು ಗ್ರಹಿಸುವುದು ಎಂದರ್ಥ . ಅರ್ಥಗಳನ್ನು ಗ್ರಹಿಸುವುದೆಂದರೆ ಒಂದು ಪಠ್ಯವನ್ನು ತೆರೆಯವುದು ಎಂದರ್ಥ. ಹೀಗೆ ತೆರೆಯುವಾಗ ಒಂದು ಆದರ್ಶ ಮಾದರಿಯ ಸೂಕ್ಷ್ಮ ಹಾಗೂ ಆದರ್ಶವಾದ ಗುಣವನ್ನು ನಾವು ಹೊಂದಿರಬೇಕಾಗುತ್ತದೆ. ಹೀಗಾಗಿ ನಿರಚನ ಸಿದ್ಧಾಂತದಲ್ಲಿ ವಿಮರ್ಶೆಯು ಸುಪ್ತ ಪ್ರಜ್ಞೆಯಿಂದ ಆಲೋಚನಾಕ್ರಮದ ಕಡೆಗೆ ಸಾಗುತ್ತದೆ.

ಮಿಲ್ಲರ್ ಪಠ್ಯವನ್ನು ಕಾಣುವುದೇ ರೂಪಕಗಳಲ್ಲಿ. ಆತನ ಪ್ರಕಾರ ರೂಪಕ ಒಂದು ನಿರ್ದಿಷ್ಟ ಪ್ರಜ್ಞೆಯನ್ನು ತನ್ನಷ್ಟಕ್ಕೆ ತಾನೆ ಸೂಚಿಸುತ್ತದೆ. ಪಠ್ಯಕ್ಕೆ ವಿಮರ್ಶಕ ಪ್ರವೇಶಿಸುವುದಾದರೂ ಹೇಗೆ? ಭಾಷೆಯೇ ಒಂದು ಪಠ್ಯಕ್ಕೆ ಪ್ರವೇಶಿಸುವ ಮೊದಲ ಹಾದಿಯೆಂದು ಮಿಲ್ಲರ್ ಪರಿಭಾವಿಸುತ್ತಾನೆ. ವಿಮರ್ಶಕ ಭಾಷೆಯ ಮೂಲಕ ಪ್ರವೇಶಿಸುವಾಗ ಸಾಮಾನ್ಯವಾದ ಭಾಷೆಯೇ ತನ್ನಿಂದ ತಾನಾಗಿ ಅನ್ವಯಕ್ಕೆ ಒಳಗಾಗಿರುತ್ತದೆ ಮತ್ತು ವಿಮರ್ಶಕನೂ ಅದರೊಂದಿಗೆ ಅನ್ವಯಕ್ಕೆ ಗುರಿಯಾಗಿರುತ್ತಾನೆ. ಅನ್ವಯವು ಕೂಡಾ ಭಾಷೆಯ ಮೂಲಕವೇ ಜರುಗುತ್ತದೆ. ಓದಿನ ಕ್ರಮವು ಅವನು ಕೃತಿಯನ್ನು ಹೇಗೆ ಅರ್ಥವಿಸಿಕೊಳ್ಳುತ್ತಾನೆ ಎಂಬುದನ್ನು ಅವಲಂಬಿಸಿಕೊಂಡಿದೆ. ಮಿಲ್ಲರ್‌ನ ಪ್ರಕಾರ, ಒಂದು ಪಠ್ಯವನ್ನು ಅರ್ಥವಿಸಿಕೊಳ್ಳುವುದೆಂದರೆ ಅದರ ಅರ್ಥಗಳನ್ನು ಬಹುತ್ವದ ಮೂಲಕ. ಗ್ರಹಿಸುವುದು ಎಂದರ್ಥ. ಅನ್ವಯದ ಮೂಲಕ ಒಬ್ಬನು ಕೃತಿಯನ್ನು ಗ್ರಹಿಸಲು ಪ್ರಯತ್ನಿಸುತ್ತಾನೆ.

'ಪಠ್ಯ' 'ನೆಯ್ಗೆ' 'ಹೊದಿಕೆ' ಇತ್ಯಾದಿ ಪದಗಳು ಪರಸ್ಪರ ಸಂಬಂಧವನ್ನು ಪಡೆದುಕೊಂಡಿರುತ್ತದೆ.

ಬರವಣಿಗೆಯೆನ್ನುವುದು ಈ ದೃಷ್ಟಿಯಿಂದ ಭಾಷೆಯ ಹೊಲಿಗೆಯಾಗಿರುತ್ತದೆ.

ಸಾಮಾನ್ಯ ವಿಮರ್ಶೆಯಲ್ಲಿ ಬಳಸಲಾಗಿರುವ 'ಏಕತ್ವಗೊಂಡ ರೂಪದ' (Organic form) ಪರಿಕಲ್ಪನೆಯನ್ನು ನೋಡಿ : ಇದು ಕೇವಲ ವಿಷಯನಿಷ್ಠ ಸ್ವರೂಪದ್ದು, ರಚನೆ ಗೊಳ್ಳುವ ಪೂರ್ವದಲ್ಲಿ ಅದು ಸೌಂದರ್ಯಶಾಸ್ತ್ರ ಹೇಳುವ ಜ್ಞಾನದ ರೂಪವಾಗಿರಲಿಲ್ಲ ಹೀಗಾಗಿಯೇ ಏಕತ್ವಗೊಂಡ ರೂಪವೆನ್ನುವುದು ಕೇವಲ ಸಂವಾದಿಯಾದುದು.

ಪೌಲ್‌ದ ಮಾನ್ ಈ ರೀತಿಯ ಪಠ್ಯದ ಓದನ್ನು ಮಾಡುವಾಗ ಆಂತರಿಕ ತರ್ಕವನ್ನು ಅದು ಅವಲಂಬಿಸಿಕೊಂಡಿರಬೇಕು ಎಂದು ಹೇಳುತ್ತಾನೆ. ಅವನ ಪ್ರಕಾರ ಒಂದು ಸಾಹಿತ್ಯ ಪಠ್ಯದಲ್ಲಿ ಕಾರಣ ಮತ್ತು ರೆಟಾರಿಕ್‌ನ ಪ್ರಶ್ನೆಯು ಮುಖ್ಯವಾಗಿರುತ್ತದೆ. ಹೀಗಾಗಿ ಪ್ರತಿಯೊಂದು ವಿಮರ್ಶೆಯೂ ಸ್ವ-ಪ್ರಜ್ಞೆ ಯನ್ನು ಇಟ್ಟುಕೊಂಡಿರುತ್ತದೆ. ಅದು ಸಿದ್ಧಾಂತದ ಗಡಿಯನ್ನು ದಾಟಿ ರೂಪುಗೊಳ್ಳುತ್ತದೆ. ಪ್ರತಿಯೊಂದು ವಿಮರ್ಶೆಯು ಈ ದೃಷ್ಟಿಯಿಂದ ಕೃತಿಗೆ ಅನುಸಂಧಾನ ಮಾಡುವಾಗ ಒಳನೋಟಗಳನ್ನು ಒಳಗೊಂಡಿರುತ್ತದೆ.

ಪೌಲ್‌ದ ಮಾನ್‌ನ ಪ್ರಕಾರ ಸ್ಹಾಹಿತ್ಯದಲ್ಲಿ ಬಳಕೆಯಾಗುವ ರೂಪಕಗಳು ನಿಜ ಜೀವನದಿಂದ ತಪ್ಪಿಸಿಕೊಳ್ಳುವುದನ್ನು ಹೇಳಿಕೊಡುತ್ತವೆ. ಅಥವಾ ನಿಜ ಜೀವನದ ಅನುಭವವನ್ನು ಪರೋಕ್ಷವಾಗಿ ಸೂಚಿಸುತ್ತದೆ. ಹೀಗಾಗಿ ಸಾಹಿತ್ಯವೆನ್ನುವುದು ಖಾಸಗಿ ಮತ್ತು ಸಾರ್ವಜನಿಕ ಚಟುವಟಿಕೆಗಳ ಭಾಗವಾಗಿ ರೂಪುಗೊಂಡಿರುತ್ತದೆ. ಮಾನ್‌ನ ಪ್ರಮುಖ ನೆಲೆಯೆಂದರೆ ಸಾಹಿತ್ಯವು ಆಲೋಚನೆಗಳನ್ನು ಪಠ್ಯವಾಗಿ ಮತ್ತು ಆಕರ್ಷಕವಾಗಿ ರೂಪಿಸಿಕೊಂಡಿರುವ ಒಂದು ವಿಧಾನ ಮಾತ್ರ. ನೀಶೆಯ ಪ್ರಕಾರ ಸಾಹಿತ್ಯವೆಂದರೆ ಆಲೋಚನೆ ಮತ್ತು ರೆಟಾರಿಕ್‌ನ ಸಂಕೀರ್ಣ ಅಭಿವ್ಯಕ್ತಿ. ಅದು ಅದರಷ್ಟಕ್ಕೆ ಪೂರ್ಣ ರೂಪವನ್ನು ಹೊಂದಿರುವುದಷ್ಟೆ ಅಲ್ಲದೆ, ಅಧು ತತ್ತ್ವಜ್ಞಾನವಾಗಿಯೂ ರೂಪಗೊಂಡಿರುತ್ತದೆ.

ಹೀಗಿದ್ದರೂ ನಿಜಕ್ಕೂ ಒಂದು ಪಠ್ಯದ ನಿರ್ಮಿತಿಗೂ ಅಂತರವಿರುತ್ತದೆ ಎಂದು ನಿರಚನ ಸಿದ್ಧಾಂತವು ಪರಿಭಾವಿಸುತ್ತದೆ. ಬರವಣಿಗೆಯು ಮಾತಿಗಿಂತ ಬೇರೆಯಾದುದು. ಬರವಣಿಗೆಯ ಸಂದರ್ಭದಲ್ಲಿ ಬರಹಗಾರನ ಉದ್ದೇಶವು ಮುಖ್ಯ ಚರ್ಚೆಯಲ್ಲಿ ಬರುತ್ತದೆ.

ನಿರಚನ ಪಠ್ಯದ ಹೊರಗಿನ ದಾರಿ ಎಂಬ ಕಲ್ಪನೆಯನ್ನೇ ನಿರಾಕರಿಸುತ್ತದೆ. ಅರ್ಥದ ಸಾವಯವ ಸಂಬಂಧ ಮತ್ತು ಬಹುತ್ವವು ಅದಕ್ಕೆ ಮುಖ್ಯ. ಒಂದು ಪಠ್ಯದ ಒಳಗಡೆಗೆ ಇರುವ ಭಾಷೆಯನ್ನು ಹತ್ತಿರದಿಂದ ನೋಡುವುದು ಮುಖ್ಯ. ಈ ದೃಷ್ಟಿಯಿಂದ ನಿರಚನವು 'ಅದರಷ್ಟಕ್ಕೆ ಪೂರ್ಣ' ಎಂಬುದನ್ನು ನಂಬುತ್ತದೆ: ವಿಮರ್ಶೆಯ ನೆಲೆಗಳು ಅದನ್ನು ಗ್ರಹಿಸುವುದು ಮಾತ್ರವೇ ಆಗಿರುತ್ತದೆ. ಪಠ್ಯವನ್ನು ಅರ್ಥವಿಸುವ ಸಾಧ್ಯತೆಗಳಲ್ಲಿ ಒಂದು. ಪೌಲ್‌ದ ಮನ್ ಹೇಳಿರುವ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು. 'ಒಂದು ಪಠ್ಯವನ್ನು ಅರ್ಥವಿಸಿಕೊಳ್ಳುವುದೆಂದರೆ ಒಂದು ಕಡೆಗೆ ಮಾತ್ರ ಸತ್ಯವನ್ನು ಗುರುತಿಸುವುದು ಎಂದು ಅರ್ಥವಲ್ಲ. ಸಾಹಿತ್ಯ ಕೃತಿಯೊಂದರ ಸತ್ಯವೆಂದರೆ ಅದು ವಿವರಣಾತ್ಮಕ ಮಾತ್ರವಲ್ಲ ಅದು ಕೃತಿಯಲ್ಲಿ ಘಟಿಸಿದ ಸಂಗತಿಯೂ ಹೌದು. ಓದಿನ ಸಂದರ್ಭದಲ್ಲಿ ಬರಹಗಾರನ ಉದ್ದೇಶವೇನು ಎಂಬುದನ್ನು ತಿಳಿಯಬೇಕಾದ ಅಗತ್ಯವಿಲ್ಲ. ಕೃತಿಯನ್ನು ಓದುವುದೆಂದರೆ ಒಂದು ವಾದವನ್ನು ನಾವು ಮುಂದಿಡುವುದು ಎಂದರ್ಥ. ಪ್ರತಿಯೊಂದು ಪಠ್ಯವು ತನ್ನನ್ನು ಹೇಗೆ ಗ್ರಹಿಸಬೇಕು ಎಂಬುದನ್ನು ನಮ್ಮ ಮೇಲೆ ಹೇರುತ್ತದೆ ಮತ್ತು ನಮ್ಮ ಓದಿಗೆ ಒಂದು ವಿನ್ಯಾಸವನ್ನು ಒದಗಿಸುತ್ತದೆ. ಹೀಗಾಗಿ ಎಲ್ಲಾ ರೀತಿಯ ಓದಿನ ಕ್ರಮಗಳು ಒಂದೇ ರೀತಿಯಲ್ಲಿರಲು ಸಾಧ್ಯವಿಲ್ಲ.

ನೋಡಿದರೆ ಚಹರೆಯೇ ಒಂದು ಪಠ್ಯವನ್ನು ಗ್ರಹಿಸುವಲ್ಲಿ ಮುಖ್ಯವಲ್ಲ. ಹಾಗೆ ನೋಡಿದರೆ ಒಂದು ಸಾಹಿತ್ಯ ಕೃತಿಯೆನ್ನುವುದು ಮುದ್ರಣ ಜಗತ್ತಿಗೆ ಬಂದ ಮೇಲೆ ಲೇಖಕನ ಅನುಮತಿಯನ್ನು ಓದಿನ ಸಂದರ್ಭದಲ್ಲಿ ಇಟ್ಟುಕೊಳ್ಳಬೇಕಾಗಿಲ್ಲ. ಹೊಕ್ಕುಳ ಬಳ್ಳಿಯ ಸಂಬಂಧವನ್ನು ಅದು ಕಳಚಿಕೊಳ್ಳುತ್ತದೆ.[1] ಹೀಗಾಗಿ ನಿರಚನದ ಪ್ರಕಾರ ಓದುಗನ ಮನಸ್ಸೇ ಒಂದು ಕೇಂದ್ರ.

ಅಡಿಟಿಪ್ಪಣಿ:-

1. ರೊಲಾಂಡ್ ಬಾರ್ತಸ್ ಇದರ ಬಗೆಗೆ ಲೇಖವೊಂದರಲ್ಲಿ ವಿವರವಾಗಿ ಚರ್ಚಿಸಿದ್ದಾನೆ.

## ಅಧ್ಯಾಯ-9

## ಯಾರು ಈ ಕೃತಿಕಾರ ?

ಈಗೀಗ ನಾವು ಲೇಖಕರ ಹೆಸರನ್ನು ನೋಡಿ ಪುಸ್ತಕಗಳನ್ನು ಕೊಂಡುಕೊಳ್ಳುತ್ತೇವಷ್ಟೆ? ಲೇಖಕನು ಸುಪ್ರಸಿದ್ಧನಾಗಿದ್ದರೆ ಅವನ ಪುಸ್ತಕವೂ ತುಂಬಾ ಚೆನ್ನಾಗಿರಬೇಕು ಎಂದು ಪರಿಭಾವಿಸುತ್ತೇವೆ, ಕನ್ನಡದಲ್ಲಿ ಕೆಲವು ಲೇಖಕರಿಗೆ 'ಸ್ಟಾರ್‌ವ್ಯಾಲ್ಯೂ' ಕೊಟ್ಟು ಅವರನ್ನು ನಮ್ಮ ರಿವ್ಯೂಗಳು, ವಿಮರ್ಶೆಗಳು ಪರೋಕ್ಷವಾಗಿ ಭಜಿಸುವ ಕೆಲಸವನ್ನು ಮಾಡುತ್ತಿವೆ. ಇದರಿಂದಾಗಿ ಕೆಲವು ಲೇಖಕರು ಪರೋಕ್ಷವಾಗಿಯೋ, ಪ್ರತ್ಯಕ್ಷವಾಗಿಯೋ ವಿಮರ್ಶೆಯನ್ನು ಬಯ್ಯುವ ಕೆಲಸವನ್ನು ಮಾಡುತ್ತಿರುತ್ತಾರೆ. ವಿಮರ್ಶಕರೆಂದರೆ ಕೃತಿಕಾರನ ಚಾರಿತ್ರ್ಯ ಹನನ ಮಾಡುವವರು ಎಂದೂ ಕೆಲ ಲೇಖಕರು ಅಲ್ಲಲ್ಲಿ ಗೊಣಗುವುದೂ ಇದೆ. ಇದರಿಂದಾಗಿ ಯಾವುದೇ ಒಬ್ಬ ಲೇಖಕನ ಕೃತಿಯು ಚೆನ್ನಾಗಿದೆ - ಚೆನ್ನಾಗಿಲ್ಲ ಎಂದು ಹೇಳಿದಾಗೆಲ್ಲಾ ವಿಮರ್ಶೆಯು ನಿರ್ದಿಷ್ಟವಾದ ಅಭಿಪ್ರಾಯವನ್ನು ರೂಪಿಸುವ ಯತ್ನವನ್ನು ಮಾಡುತ್ತದೆಯೇ ಹೊರತು ಆ ಅಭಿಪ್ರಾಯಗಳೇ ಸಾರ್ವತ್ರಿಕವೂ- ಸಾರ್ವಜನಿಕವೂ ಆಗಬೇಕಾಗಿಲ್ಲ.

ಆಧುನಿಕವಾದ ಸಂಸ್ಕೃತಿಯೊಳಗೆ ಲೇಖಕನು ತನ್ನದೇ ಆದ ಅಧಿಕೃತ ಮುದ್ರೆಯನ್ನು ಒಂದು ಗ್ರಂಥದಲ್ಲಿ ಮುದ್ರಿಸಿಕೊಳ್ಳಬಲ್ಲ. ಆಧುನಿಕ ಮುದ್ರಣ ಸಂಸ್ಕೃತಿಯು ಲೇಖಕನಿಗೆ ಅನೇಕ ರೀತಿಯ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ನಾವದನ್ನು ' Copyright ' ಅಥವಾ 'ಮುದ್ರಿತ ಪುಸ್ತಕದ ಹಕ್ಕು' ಎಂದು ಕರೆಯುತ್ತೇವೆ. ಯಾವುದೇ ಒಂದು ಮುದ್ರಿತವಾದ ಪುಸ್ತಕದ ಹಕ್ಕು ಲೇಖಕನಿಗೆ ಲಗತ್ತಾಗಿರುತ್ತದೆ. ಇದರಿಂದಾಗಿ ನಾವು ಪುಸ್ತಕಕ್ಕೂ ಗ್ರಂಥಕರ್ತನಿಗೂ ನಿರ್ದಿಷ್ಟವಾದ ಸಂಬಂಧವನ್ನು ಕಲ್ಪಿಸಿಬಿಟ್ಟು ಕೃತಿಕಾರನನ್ನು ಹೊರತುಪಡಿಸಿ ಕೃತಿಯನ್ನು ಓದುವುದೇ ಅಸಾಧ್ಯವೆಂದು ತಿಳಿದುಕೊಂಡಿದ್ದೇವೆ. ಯಾರು ಕೃತಿಯನ್ನು ಬರೆಯುತ್ತಾನೋ ಅವರು ಕೃತಿಕಾರರೆಂದೂ, ಯಾರು ಗ್ರಂಥವನ್ನು ಬರೆಯುತ್ತಾರೋ ಅವನು ಗ್ರಂಥಕರ್ತರೆಂದೂ ಕಾವ್ಯವನ್ನು ಬರೆಯುವವರು ಕವಿಗಳೆಂದೂ ಹೇಳುತ್ತೇವೆ. 'ಅವನು ಒಳ್ಳೆಯ ಕಾದಂಬರಿಕಾರ, 'ಅವನು ಒಳ್ಳೆಯ ಲೇಖಕ' ಇತ್ಯಾದಿ. ಇದೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಬರಹಕ್ಕೂ ಬರಹಗಾರನಿಗೂ ನಿಕಟವಾದ ಸಂಬಂಧವನ್ನು ಜೋಡಿಸುವುದಷ್ಟೇ ಅಲ್ಲ. ಆ ಮುಖಾಂತರ ಲೇಖಕನಿಗೆ ವಿಶೇಷ ಮನ್ನಣೆಯನ್ನು ಕೊಡುವ ಕೆಲಸವೂ ಆಗುತ್ತಿರುತ್ತದೆ, ಇವೆಲ್ಲವೂ ಯಾರಿಗೆ ಅನ್ವಯವಾಗುತ್ತವೆ? 'ಲಿಖಿತ ಸಂಸ್ಕೃತಿ'ಯಲ್ಲಿ ಕೆಲಸ ಮಾಡುವವರಿಗೆ ಈ ರೀತಿಯ ವಿಶೇಷ ಮನ್ನಣೆಯನ್ನು ಪಡೆಯಲು ಸಾಧ್ಯವಾಗುತ್ತದೆ. ಯಾವುದೋ ಜಾನಪದ ತ್ರಿಪದಿ, ಜಾನಪದ ಕಥನ ಕಾವ್ಯವಾಗಲೀ ಇದೆಯೆಂದು ಭಾವಿಸೋಣ ಆ ಸಂದರ್ಭದಲ್ಲಿನಾವು ಈರೀತಿಯ ವಿಶೇಷ ಮನ್ನಣೆಯನ್ನು ಕೊಡುವುದು ಅಸಾಧ್ಯ. ಇದರಿದಾಗಿ, ನಮ್ಮ ಆಧುನಿಕ ಚರ್ಚೆಯು ಕೃತಿಕಾರ ಮತ್ತು ಕೃತಿಯ ಒಳಸುಳಿಯಲ್ಲಿ ಮಾತ್ರ ರೂಪುಗೊಳ್ಳುವುದೇ ಅಲ್ಲದೆ, ಕೃತಿಯನ್ನು ಗ್ರಹಿಸುವುದೆಂದರೆ ಕೃತಿ ಕಾರನ ವಿವರವನ್ನು ಗ್ರಹಿಸುವುದು ಎಂದು ಭಾವಿಸಲಾಗಿದೆ. ಈ ನಂಟು ತುಂಬಾ ಎಂದು ಭಾವಿಸುವುದರ ಮುಖಾಂತರ ನಾವು ತುಲನಾತ್ಮಕ ಚರ್ಚೆಗಳನ್ನು ಶುರುಮಾಡುತ್ತೇವೆ.

ತೀರಾ ಸಾಮಾನ್ಯವಾದ ಅರ್ಥದಲ್ಲಿ ಕೃತಿಕಾರನನ್ನು - ಕೃತಿಯನ್ನು ಜೊತೆ ಜೊತೆಗೆ ತಂದು ಕೃತಿ ಕಾರನನ್ನು ವೈಭವೀಕರಿಸುವುದಕ್ಕೂ ಒಂದು ನಿರ್ದಿಷ್ಟ ಸಾಮಾಜಿಕ ಚಾರಿತ್ರಿಕ ಸಂದರ್ಭದಲ್ಲಿಟ್ಟು ಪರಿಶೀಲಿಸುವ ವಿಧಾನಕ್ಕೂ ವ್ಯತ್ಯಾಸವಿದೆ. ನಿರ್ದಿಷ್ಟ ಸಾಮಾಜಿಕ ಚಾರಿತ್ರಿಕ ಸಂದರ್ಭದಹಿನ್ನೆಲೆಯಲ್ಲಿ

ಕೃತಿ ಮತ್ತು ಬರಹಗಾರರ ನಡುವಣ ಸಂಬಂಧವನ್ನು ಸರಳೀಕರಿಸಿಕೊಂಡು ನೋಡುವುದು ಎಂದರ್ಥವಲ್ಲ. ಹೀಗೆ ನೋಡಿದರೆ ಸಾಮಾಜಿಕ ರಾಜಕೀಯ ಸಂದರ್ಭದಲ್ಲಿಟ್ಟುಕೊಂಡು ಅಂತಿಮವಾಗಿ ಒಬ್ಬ ಲೇಖಕನಿಗೆ ಸಾಂಸ್ಕೃತಿಕ ಮಹತ್ವವೆಷ್ಟಿದೆಯೆಂದು ಪರಿಶೀಲಿಸುವುದೇ ಆಗಿದೆ. ಈ ರೀತಿಯ ಪರಿಶೀಲನೆಯಲ್ಲಿ ಲೇಖಕನವನ್ನು ಒಬ್ಬ ಸಾಂಸ್ಕೃತಿಕ ನಾಯಕನೆಂಬಂತೆ ನೋಡುವುದಿಲ್ಲ. ಅದರ ಬದಲಿಗೆ ಲೇಖಕನಾಗಿ ಆತನ ಸಾಮಾಜಿಕ ಪ್ರಸ್ತುತತೆಯೇನು? ಸಂಸ್ಕೃತಿಯ ಬೆಳವಣಿಗೆಯಲ್ಲಿ ವಹಿಸುತ್ತಿರುವ ಪಾತ್ರ ಯಾವುದು ಎಂಬುದರ ಸೂಚನೆಯು ಮುಖ್ಯವಾಗುತ್ತವೆ. ವ್ಯಕ್ತಿ ಮತ್ತು ಆತನ ಬರವಣಿಗೆಯ ಕುರಿತ ವಿಮರ್ಶೆಯೇ ಈ ರೀತಿಯ ಅಧ್ಯಯನ ಕ್ರಮದಲ್ಲಿ ಮುಖ್ಯವಾಗುತ್ತದೆ.

ಕೃತಿ ಮತ್ತು ಕೃತಿಯ ನಡುವಣ ಸಂಬಂಧವನ್ನು ಒಂದು ಹೊರಗಿನ ಅಂಶವಾಗಿ ಪರಿಗಣಿಸುವ ವಿಧಾನವು - ಕೃತಿಕಾರ ಮತ್ತು ಕೃತಿಯ ನಡುವಣ ಸಂಬಂಧವನ್ನು ನಿರ್ವಚಿಸುವಲ್ಲಿ ಕೆಲವು ಸಮಸ್ಯೆಗಳನ್ನು ಎದುರಿಸುತ್ತವೆ. ಕೃತಿಕಾರನು ಆಲೋಚನೆ ಮತ್ತು ಬರಹದ ನಡುವಣ ಸಂಬಂಧವನ್ನು ಒಂದು ಅನನ್ಯವಾದ ಮಾದರಿಗಳೆಂದು ಗ್ರಹಿಸುವ ಅಪಾಯಗಳಿರುತ್ತವೆ. ಹಾಗೆಯೇ ಒಂದು ಕೃತಿಯ ಚರ್ಚೆಯೆಂದರೆ ಕೃತಿ ಕಾರನ ಸಮಗ್ರ ಆಲೋಚನೆಯ ಪ್ರತೀಕವೆಂದು ಪರಿಭಾವಿಸುವ ಅಪಾಯ ವಿರುತ್ತದೆ.

ಒಂದು ರೀತಿಯ ಪ್ರಮೇಯವನ್ನು ನೋಡಿ : ಯಾವುದರಿಂದಾಗಿ ಒಬ್ಬ ಲೇಖಕನು ಬರೆಯುವಂತಾಗಿದೆ? ಯಾವುದನ್ನು ಒಬ್ಬ ಲೇಖಕ ಬರೆಯುತ್ತಿದ್ದಾನೆ? ಈ ಎರಡೂ ಪ್ರಮೇಯಗಳು ಬೇರೆ ಬೇರೆಯೇ . ಇದನ್ನೇ ಮತ್ತೊಂದು ರೀತಿಯಲ್ಲಿ ಬೆಕೆಟ್ ಕೇಳಿದ್ದಾನೆ: ಯಾವುದು ಅವನನ್ನು ಮಾತಾಡುವಂತೆ ಮಾಡಿದೆ ? ಅಥವಾ ಯಾವುದನ್ನು ಅವನು ಮಾತಾಡುತ್ತಾನೆ? ಫುಕೋ ಇದನ್ನು ಆಧುನಿಕ ಯುಗದ ತೀರಾ ಮೂಲಭೂತವಾದ ಪ್ರಶ್ನೆಯೆಂದು ಕರೆಯುತ್ತಾನೆ. ಈ ಪ್ರಶ್ನೆಯು ನಮ್ಮ ಬರವಣಿಗೆಯ ಕ್ರಮದ ಕುರಿತು ಮಾತಾಡುತ್ತದೆ. ಅಷ್ಟೇ ಅಲ್ಲ, ಇದು ಆಧುನಿಕ ಯುಗದ ಬರವಣಿಗೆಯ ಕ್ರಮದ ಕುರಿತಂತೆ ಒಂದು ನೈತಿಕವಾದ ಪ್ರಶ್ನೆಯೂ ಹೌದು. ನಾವು ಯಾವುದರ ಕಡಗೆ ಹೆಚ್ಚಿನ ಒತ್ತನ್ನು ಕೊಡುತ್ತೇವೆ ಎಂಬುದರಿಂದಾಗಿ ಈ ಪ್ರಶ್ನೆಯು ಮುಖ್ಯವಾಗಿದೆ ಕೂಡಾ. ಯಾರು ಮಾತಾಡುತ್ತಾರೋ ಅವರನ್ನು ನಾವು ಲೇಖಕರು ಎಂದು ಕರೆಯುವುದಿಲ್ಲ. ಯಾರು ಬರೆಯುತ್ತಾರೋ ಅವರನ್ನು ನಾವು ಲೇಖಕರು ಎಂದು ಕರೆಯುತ್ತೇವೆ. ಜಾನಪದದ ಸಂದರ್ಭದಲ್ಲಿ ಈ ಮಾತು ವ್ಯತಿರಿಕ್ತವಾಗುತ್ತದೆ. ಅಲ್ಲಿಯೂ ಜಾನಪದ ಹಾಡುಗಾರರು ಅಥವಾ ಕಲಾವಿದರು ಎಂದು ಗುರುತಿಸುತ್ತೇವೆಯೇ ಹೊರತು ಮತ್ತೇನೂ ಅಲ್ಲ. ಹಾಗೆ ನೋಡಿದರೆ ಒಬ್ಬನನ್ನು ನಾವು ಲೇಖಕ ಎಂದು ಗುರುತಿಸಬೇಕೆಂದರೆ ಅವನು ನಮಗೆ ಪೂರ್ಣಗೊಂಡ ಲೇಖನಗಳನ್ನು ; ಕವಿತೆಯನ್ನು : ಅಥವಾ ಯಾವುದೇ ಬರಹವನ್ನು ನೀಡಿರಬೇಕು, ಇಲ್ಲದಿದ್ದರೆ ಅವನನ್ನು ನಾವು ಲೇಖಕ ಎಂದು ಕರೆಯಲಾರೆವು.

ಬರವಣಿಗೆಯೆನ್ನುವುದನ್ನು ನೋಡಿ: ಅದು ಬರೆದ ಮೇಲೆ ಅದಕ್ಕೆ ಮತ್ತೆ ಯಾವ ಸ್ವಾತಂತ್ರ್ಯವೂ ಇಲ್ಲ, ಅದು ಅಲ್ಲಿಗೆ ಪೂರ್ಣಗೊಂಡಂತೆಯೇ. ಆದರೆ ಮಾತಿನಲ್ಲಿ ಕೆಲವನ್ನು ಮತ್ತೆ ಹೇಳಬಹುದು ಇಲ್ಲವೇ ವಿವರಿಸಬಹುದು. ಈ ದೃಷ್ಟಿಯಿಂದ ಬರವಣಿಗೆಯನ್ನುವುದು ಅದರಷ್ಟಕ್ಕೆ ಅದರ ಅಸ್ತಿತ್ವವನ್ನು ಸೂಚಿಸುತ್ತದೆ. ಹೀಗಾಗಿ ಬರವಣಿಗೆಯಲ್ಲಿ ಒಂದು ನಿಯಮ ಏನಿರುತ್ತದೋ ಅದರಲ್ಲಿಯೇ ಅದು ರೂಪುಗೊಳ್ಳಬೇಕಾಗುತ್ತದೆ. ಬರೆಯುವ ಕ್ರಮದಲ್ಲಿ ನಮಗೆ ಬದಲಾವಣೆಯು ಸಾಧ್ಯವಿಲ್ಲ. ಆ ಸಂದರ್ಭದಲ್ಲಿ ಅಕ್ಷರಗಳ ಜೋಡಣೆಗೂ ಒಂದು ರೀತಿಯಿರುತ್ತದೆ. ಈ ಜೋಡಣೆಯನ್ನು ನಾವು ಬದಲಾಯಿಸುವುದು ಅಸಾಧ್ಯ, ಹಾಗೆಯೇ ಬರೆಯುವುದೆಂದರೆ ಕೇವಲ ಬರವಣಿಗೆಯ ಪ್ರಕ್ರಿಯೆಯು

ಪ್ರಶ್ನೆಯೂ ಅಲ್ಲ. ಅದರಿಂದಾಚೆಗೂ ಕೆಲವು ಸಂಗತಿಗಳಿವೆ. ಅವೆಂದರೆ ಬರವಣಿಗೆಗೂ ವಿಷಯಕ್ಕೂ ಇರುವ ನಂಟು . ಈ ನಂಟನ್ನು ಹೊರತು ಪಡಿಸಿ ಬರೆಯುವ ಪ್ರಕ್ರಿಯೆಯನ್ನು ಯೋಚಿಸುವುದು ಅಸಾಧ್ಯ. ಬರೆಯುವುದೆಂದರೆ ವಿಷಯವನ್ನು ಬರವಣಿಗೆಯ ಜೊತೆಗೆ ಅಂಟಿಸುವ ಪ್ರಕ್ರಿಯೆಯಾಗಿರುವುದರಿಂದ ಅಲ್ಲಿರುವ ಹೊಂದಾಣಿಕೆಯೇ ಪ್ರಶ್ನಾರ್ಹ. ಏಕೆಂದರೆ ಬರೆದ ಮೇಲೆ ಒಂದು ವಿಷಯಕ್ಕೂ ಬರವಣಿಗೆಯ ಕ್ರಮಕ್ಕೂ ನಡುವೆ ಒಂದು ಅಂತರವು ಸೃಷ್ಟಿಯಾಗುತ್ತದೆ. ಕತೆಯನ್ನು ಹೇಳುವ ಕ್ರಮಕ್ಕೂ ಕತೆಯನ್ನು ಬರೆಯುವಕ್ರಮಕ್ಕೂ ಇರುವ ವ್ಯತ್ಯಾಸವನ್ನು ನೋಡಿ : ಕತೆಯನ್ನು ಹೇಳುವಾಗ ನಾವು ಅನೇಕ ವಿಷಯಗಳನ್ನು ಹೇಳಬಹುದು. ಕೆಲವನ್ನು ಬಿಟ್ಟು ಮೌನವಹಿಸಬಹುದು. ಆದರೆ ಬರವಣಿಗೆಯಲ್ಲಿ ಹೀಗಾಗುವುದಿಲ್ಲ. ಬರವಣಿಗೆಯ ಪ್ರಕ್ರಿಯೆಯೆಂದರೆ ಅದು ಅನೇಕ ಕಾರಣಗಳಿಂದ ತ್ಯಾಗದ ಪ್ರಶ್ನೆ. ಬರವಣಿಗೆಯ ನಂತರ ಲೇಖಕನನ್ನು ನಾವು ಕೃತಿಗಳ ಮೂಲಕವೇ ಗುರುತಿಸುತ್ತೇವೆ. ಅಷ್ಟರಮಟ್ಟಿಗೆ ಲೇಖಕನು ಆ ಕೃತಿಯಿಂದಾಗಿ ಗೈರುಹಾಜರಿಯಾಗುತ್ತಾನೆ. ನಾವು ಅವನನ್ನು ನಿಜವಾದ ಮನುಷ್ಯನನ್ನಾಗಿ ಗುರುತಿಸುವ ಬದಲು ಅವನನ್ನು ಲೇಖಕನನ್ನಾಗಿ ಗುರುತಿಸುತ್ತೇವೆ. ನಾವು ಸಾಹಿತ್ಯ ವಿಮರ್ಶೆಯಲ್ಲಿ ಕೃತಿಕಾರನನ್ನು ಗಮನಿಸಿಕೊಂಡು ಕೃತಿಯನ್ನು ಗ್ರಹಿಸುವ ಕ್ರಮವಿದೆ. ಹಾಗೆಯೇ ಸಮಾಜ ಮೂಲಕವೂ ಕೃತಿಯನ್ನು ಗ್ರಹಿಸುವ ಪ್ರಯತ್ನವನ್ನು ಮಾಡುತ್ತೇವೆ. ಆದರೆ, ನಿರಚನವು ಲೇಖಕ ಬರೆದ ವಿಷಯವು ಅವನಿಂದ ಹೊರತಾಗಿಯೂ ಇರುತ್ತದೆ ಎಂದು ಭಾವಿಸುತ್ತದೆ. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ, ಲೇಖಕನು ಬರವಣಿಗೆಯ ಹೊರತಾಗಿಯೂ ಇರಬಲ್ಲ. ಈ ದೃಷ್ಟಿಯಿಂದ ಬರವಣಿಗೆಗೂ ಲೇಖಕನಿಗೂ ಅವಿನಾಭಾವ ಸಂಬಂಧವಿದೆಯೆಂದು ನಾವೆಷ್ಟು ಹೇಳಿಕೊಂಡರೂ ಆ ರೀತಿಯ ಸಂಬಂಧವು ಇಲ್ಲದೆಯೂ ಇರಬಹುದು. ಅಷ್ಟೇ ಅಲ್ಲ, ಒಬ್ಬ ಲೇಖಕನು ದಿವಂಗತನಾದ ಮೇಲೂ ಅವನ ಬರವಣಿಗೆಯು ಇರಬಲ್ಲುದು, ಉದಾಹರಣೆಗೆ ನಾವೀಗಲೂ ಪಂಪನ ಕೃತಿಯನ್ನು; ಅಕ್ಕಮಹಾದೇವಿಯ ವಚನಗಳನ್ನು ಓದುತ್ತಿದ್ದೇವೆ. ಆದರೆ ಅವರಾರೂ ಈಗ ನಮ್ಮ ಜೊತೆಗಿಲ್ಲ. ಅವರ ಕೃತಿಗಳು ಮಾತ್ರ ನಮ್ಮ ಜೊತೆಗಿವೆ, ಅವರ ಕೃತಿಗಳನ್ನು ಎಷ್ಟೊಂದು ಜನ ಓದಿರಬಹುದು ? ಅಷ್ಟೇ ಅಲ್ಲ, ಎಷ್ಟೊಂದು ಜನ ಅವರ ಕೃತಿಗಳನ್ನು ಎಷ್ಟೊಂದು ರೀತಿಯಲ್ಲಿ ಅರ್ಥಮಾಡಿಕೊಂಡಿರಬಹುದು? ಈ ಕೃತಿಗಳನ್ನು ಓದುವಾಗ ಪಂಪನೇ ಆಗಲೀ, ಅಕ್ಕಮಹಾದೇವಿಯಾಗಲಿ ಯಾವ ಉದ್ದೇಶಗಳನ್ನು ಇಟ್ಟುಕೊಂಡು ಯಾವ ಆಲೋಚನೆಯನ್ನು ಕೃತಿಯಲ್ಲಿ ಹೇಳಿದರು ಎಂದು ಹೇಳುವುದು ಹೇಗೆ? ನಮ್ಮ ನಮ್ಮ ಓದಿನ ಕ್ರಮದಲ್ಲಿ ಈ ಲೇಖಕರು ಗೈರುಹಾಜರಿಯಾಗಿ ಅವರ ಕೃತಿಗಳು ನಮ್ಮ ನಮ್ಮ ಓದಿನಲ್ಲಿ ಪುನರ್ ಸೃಷ್ಟಿಯಾಗುತ್ತಾ ಬರುತ್ತೇವೆ ಎಂದು ಈಚೆಗೆ ಭಾವಿಸುತ್ತಾಬಂದಿಲ್ಲವೆ? ಒಂದು ಒಳ್ಳೆಯ ವಾಸ್ತು ಶಿಲ್ಪವನ್ನು ನೋಡಿದಾಗ ನಾವು ಆನಂದಿಸುವುದು ಮತ್ತು ನಾವದಕ್ಕೆ ಪ್ರತಿಕ್ರಿಯಿಸುವುದು ನಮ್ಮದೇ ಅನುಭವಗಳ ಹಿನ್ನೆಲೆಯಿಂದ. ವಾಸ್ತುಶಿಲ್ಪವನ್ನು ನೋಡಿ ಖುಶಿಪಡುವಾಗ ನಾವು ಅದನ್ನು ಯಾರು ಕಟ್ಟಿದರು? ಕಟ್ಟಿದವನಿಗೂ ವಾಸ್ತುಶಿಲ್ಪಕ್ಕೂ ಯಾವ ಸಂಬಂಧ? ಅದು ಹೇಗಾಯಿತು? ಇತ್ಯಾದಿ ಸಂಗತಿಗಳನ್ನು ನಮ್ಮ ಗಮನಕ್ಕೆತಂದುಕೊಳ್ಳುತ್ತೇವೆಯೇ? ಈ ದೃಷ್ಟಿಯಿಂದ ಸಾಹಿತ್ಯ ಕೃತಿಯೊಂದರ ಚರ್ಚೆಯಲ್ಲಿ ಅನವಶ್ಯಕ ಕೃತಿಕಾರನನ್ನು ತಂದು ಚರ್ಚಿಸಬೇಕಾದ ಅಗತ್ಯವಿದೆಯೆ? ನಾವು ಎಷ್ಟೇ ಪ್ರಯತ್ನ ಮಾಡಿದರೂ ಕೂಡಾ ಕೃತಿಕಾರನ ಆಲೋಚನೆಯು ಕೃತಿಯೊಂದರಲ್ಲಿ ಹೀಗೆ ಒಡಮೂಡಿದೆ ಎಂದು ಕೃತಿಯಲ್ಲಿ ಗುರುತಿಸುವುದು ತುಂಬಾ ಕಷ್ಟ ಸಾಧ್ಯವಾದ ವಿಚಾರವೇ ಸರಿ. ಬರೆಯಲಾಗಿರುವ ಸಂಗತಿಯಷ್ಟೇ ಲೇಖಕನದು ಎಂದು ಹೇಳುವುದೂ ಕಷ್ಟ. ಲೇಖಕನು ಬರೆದಿರುವುದು ಎಷ್ಟೋ- ಅಷ್ಟೇ ಬರೆಯದೇ ಉಳಿದಿರುವುದೂ ಇರಬಹುದು.

ಯಾವುದೇ ಒಂದು ಕೃತಿಯನ್ನು ಓದಿ- ಇದು ಈ ಲೇಖಕನ ಅಭಿಪ್ರಾಯ ಎಂದು ಕರೆಯುವುದು

ಎಷ್ಟರ ಮಟ್ಟಿಗೆ ಸರಿಯಾಗುತ್ತದೆ? ಪ್ರಕಟಿತವಾದ ಬರಹಗಳನ್ನು ಓದಿ-ಇದು ಈ ಲೇಖಕನ ಅಭಿಪ್ರಾಯವೆಂದು ನಾವು ಸರಳಗೊಳಿಸಿ ಹೇಳಿಬಿಡುತ್ತೇವೆ. ವಿಚಿತ್ರವೆಂದರೆ ಯಾವುದೇ ಲೇಖಕನ ಪ್ರಕಟಿತ ಕೃತಿಯನ್ನು ನೋಡಿ ನಾವು ಇದನ್ನು ಬರಹಗಾರನ ತಾತ್ತ್ವಿಕತೆಯೆಂದು ಗುರುತಿಸಬಹುದು ಎಂಬ ಅಭಿಪ್ರಾಯವನ್ನುನಾವು ಹೇಳಿಬಿಡುವುದು. ಹೀಗೆ ಮಾಡುತ್ತಿರುವಾಗ ಯಾವುದೋ ಕೃತಿರಚನೆಗಾಗಿ ಲೇಖಕನು ಮಾಡಿಕೊಂಡಿರಬಹುದಾದ ಟಿಪ್ಪಣೆಯನ್ನಾಗಲೀ:, ಅದಕ್ಕಾಗಿ ಅವನು ಮಾಡಿಕೊಂಡಿರುವ ಸಿದ್ಧತೆಗಳನ್ನಾಗಲೀ ಬರಹಗಳೆಂದು ಪರಿಗಣಿಸಲಾಗದು. ಒಂದು ಪ್ರಕಟಿತ ಕೃತಿಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳನ್ನೇ ಹಿಡಿದುಕೊಂಡು ಇದು ಬರಹಗಾರನ ಆಲೋಚನೆಯಾಗಿರಬಹುದು ಎಂದು ಹೇಳಿದರೆ, ಕೃತಿಯೊಳಗೆ ಅನುಕ್ತಗೊಂಡಿರುವ ಲೇಖಕನ ಟಿಪ್ಪಣಿಗಳು ಏನಾಗಬೇಕು? ಲೇಖಕನು ಯಾರನ್ನು ಭೇಟಿಯಾಗಿದ್ದ? ಯಾರೊಡನೆ ಚರ್ಚಿಸಿದ್ದ? ಎಷ್ಟು ಹೊತ್ತಿಗೆ ಬರೆದ? ಯಾಕೆ ಬರೆದ? ಈ ತರಹದ ಅನೇಕ ಸಂಗತಿಗಳು ಲೇಖಕನ ವಿಚಾರಧಾರೆಯನ್ನು ಸೂಚಿಸಲಾರವೆ? ಇವೆಲ್ಲಾ ಲೇಖಕನ ಆಲೋಚನೆಯ ಪ್ರತೀಕವಲ್ಲವೆ ?. ಈ ದೃಷ್ಟಿಯಿಂದ ಬರವಣಿಗೆಯಲ್ಲಿ ಹಾಜರಾದ ಸಂಗತಿಗಳು ಎಷ್ಟು ಇವೆಯೋ ಬರವಣಿಗೆಯಲ್ಲಿ ಹಾಜರಾಗದ ಸಂಗತಿಗಳೂ ಕೂಡಾ ಅಷ್ಟೇ ಇರುತ್ತವೆ.

ನಾವು 'ಕೃತಿ' 'ಗ್ರಂಥ' 'ಪುಸ್ತಕ' ಈರೀತಿಯ ಮಾತುಗಳನ್ನುಪ್ರಕಟಿತ ಕೃತಿಗಳಿಗೆ ಸಂಬಂಧಿಸಿದಂತೆ. ಬಳಸುತ್ತಿರುವಾಗ ಲೇಖಕನಿಗೂ ಕೃತಿಗೂ ಒಂದು ನಿರ್ಣಾಯಕವಾದ ಸಂಬಂಧವನ್ನು ಕಲ್ಪಿಸಿಕೊಂಡು ಇದನ್ನು ಪ್ರತಿಪಾದಿಸುತ್ತೇವೆ. ಅಪೂರ್ಣಗೊಂಡ ಯಾವ ಕೃತಿಯೂ ಪ್ರಕಟವಾಗುವುದಿಲ್ಲ. ಮತ್ತು ಇದೊಂದು. ಅಸಾಧ್ಯವಾದ ಪ್ರಶ್ನೆಯೇ ಸರಿ , ನಾವು ಕೃತಿಯೆಂದು ಕರೆಯುವುದು ಪೂರ್ಣಗೊಂಡ ರೂಪವನ್ನು , ಅರ್ಧಬರೆದ, ಅಪೂರ್ಣಗೊಂಡ ಬರಹ ರೂಪಗಳನ್ನು ನಾವು ಯಾವತ್ತು ಸಾಹಿತ್ಯ ಕೃತಿಯೆಂದಾಗಲೀ ಗ್ರಂಥವೆಂದಾಗಲೀ ಕರೆಯುವುದಿಲ್ಲ. ಹಾಗೆ ನೋಡಿದರೆ ಕೃತಿಯೆಂದರೇನೇ ಅದುರಚಿತವಾದುದು ಎಂಬ ಗೃಹೀತ ಅರ್ಥವು ನಮ್ಮಲ್ಲಿಪ್ರಚಲಿತವಾಗಿದೆ, ಕೃತಿಯೆಂದು ಕರೆಯುವಾಗಲೇ ಅದಕ್ಕೊಂದು ಸ್ಥಾನವನ್ನು ನಾವು ಕಲ್ಪಿಸಿಕೊಂಡು. ಅದರ ಮುಖೇನ ಒಬ್ಬ ಲೇಖಕನ ಸ್ಥಾನವನ್ನು ನಿರ್ಣಯಿಸುತ್ತೇವೆ.

ಬರಹ ಎನ್ನುವುದು ಬರಹಗಾರನ ಪರೋಕ್ಷವಾದ ಅಸ್ತಿತ್ವವನ್ನು ಸೂಚಿಸುತ್ತದೆಯೆನ್ನುವುದು ನಿಜ. ಬೇರೊಂದು ಮಾತಿನಲ್ಲಿಹೇಳಬೇಕೆಂದರೆ ಬರಹವು ಬರಹಗಾರನ ಅಸ್ತಿತ್ವನ್ನು ಕಾಪಾಡಿಕೊಂಡು ಬರುತ್ತದೆ. ಬರಹದ ಎದುರಿನಲ್ಲಿಯೇ ಲೇಖಕನಿದ್ದಾನೆ ಎಂದು ಇದರ ಅರ್ಥವಲ್ಲ. ಬರವಣಿಗೆಯ ಜೊತೆಗೆ ಲೇಖಕನ ಸಂಬಂಧವನ್ನು ಗುರುತಿಸುವುದು ನೇರವಾದು ದೇನೂ ಅಲ್ಲ. ಇಲ್ಲಿ ಬರವಣಿಗೆಯು ಎದುರು ಇದೆ ಎಂಬುದರಿಂದ ಬರಹಗಾರನು ಅದರ ಹಿಂದೆ ಇದ್ದಾನೆ ಎಂದು ಅರ್ಥವಿಸುತ್ತೇವೆ. ಯಾಕೆಂದರೆ ಬರವಣಿಗೆಯೇ ಆತನ ಅಸ್ತಿತ್ವಕ್ಕೆ ಸಾಕ್ಷಿ ಹೇಳುತ್ತದೆ. ಆದರೆ ನಾವು ಬಹಳ ಮುಖ್ಯವಾಗಿ ಒಂದು ಬರಹವನ್ನು ಓದುವಾಗ ಆ ಬರಹವುಯಾವುದನ್ನು ಹೇಳುತ್ತದೆ ಎಂದು ಅರ್ಥಮಾಡಿಕೊಳ್ಳಲು ಯತ್ನಿಸುತ್ತೇವೆಯೇ ಹೊರತು ಬೇರೆ ಯಾವುದೇ ಅಂಶಗಳನ್ನು ಒಂದು ಬರಹದ ಚೌಕಟ್ಟಿನೊಳಗೆ ತರಲು ಪ್ರಯತ್ನಿಸುವುದಿಲ್ಲ. ಈ ದೃಷ್ಟಿಯಿಂದ ಬರವಣಿಗೆಯೆನ್ನುವುದು ಅನಂತ ಅವಕಾಶಗಳನ್ನು:, ಅನಂತ ಓದುಗಳನ್ನು ಬಯಸುತ್ತದೆ. (ಯಾವುದೇ ಬರವಣಿಗೆಯು ಓದಿಗಾಗಿ ತೆರೆದುಕೊಂಡಿರುತ್ತದೆ).

ಸಾಮಾನ್ಯವಾಗಿ ಬರವಣಿಗೆಯನ್ನುನಾವು ಎರಡು ಕ್ರಮದಲ್ಲಿ ಗ್ರಹಿಸಬಹುದು ತಾನೆ? ಒಂದು ಮಾದರಿ ಬರವಣಿಗೆಯನ್ನು ಬಹಳ ಪವಿತ್ರವೆಂದುಭಾವಿಸಿಕೊಂಡು ಓದುವ ಕ್ರಮ. ವೇದ ಉಪನಿಷತ್ತು,ದಾಸರಕೀರ್ತನೆಗಳು, ವಚನಗಳು ಮುಂತಾದವುಗಳನ್ನು ಅನೇಕ ಸಂದರ್ಭದಲ್ಲಿ ನಾವು

ಪವಿತ್ರ ಪಠ್ಯಗಳು ಎನ್ನುವಂತೆ ಓದುತ್ತಾ ಬಂದಿದ್ದೇವೆ. ಈರೀತಿಯಲ್ಲಿ ಓದುವುದು ಒಂದು ಕ್ರಮವಾದರೆ, ಯಾವುದೇ ಪಠ್ಯವನ್ನು ವಿಮರ್ಶಾತ್ಮಕವಾಗಿ ಓದುವುದು ಮತ್ತೊಂದು ಕ್ರಮವಾಗಿದೆ. ಹಾಗಿ ಓದುವಾಗ ಒಂದು ರೀತಿಯಿಂದ ಧಾರ್ಮಿಕ ಆಶಯಗಳು ಮುಖ್ಯವಾಗುವುದಿಲ್ಲ. ಅದಕ್ಕೆ ಇರುವ ಸಾಧ್ಯತೆಗಳು ಬೇರೆ. ಉದಾಹರಣೆಗೆ: ಧಾರ್ಮಿಕ ದೃಷ್ಟಿಕೋನದಿಂದ ರಾಮಾಯಣವನ್ನು ಓದುವಾಗ ನಾವು ಅದಕ್ಕೆ ಕಲ್ಪಿಸಿಕೊಡುವ ಅವಕಾಶಗಳೇ ಬೇರೆ. ರಾಮಾಯಣದ ರಾಮನೆಂದರೆ ಅವನೊಬ್ಬ ಪುರುಷೋತ್ತಮ. ಅವನಲ್ಲಿಯಾವ ದೌರ್ಬಲ್ಯಗಳೂ ಇಲ್ಲವೆಂಬ ತಿಳುವಳಿಕೆಯು ನಮ್ಮ ಓದಿನ ಮೇಲೆ ನಿರ್ದಿಷ್ಟ ಪರಿಣಾಮವನ್ನು ಬೀರಬಲ್ಲದು. ಇಂತಹ ಸಂದರ್ಭದಲ್ಲಿ ಈರೀತಿಯ ಕೃತಿಗಳಿಗೆ ವಿಶೇಷ ಸ್ಥಾನವನ್ನು ನಾವು ಕೊಡಬಹುದು, ಅಷ್ಟೇ ಅಲ್ಲ; ಹೀಗೆ ಕೃತಿಗಳನ್ನು ಓದುವಾಗ ಕೃತಿಯ ಅಂತರಾಳದಲ್ಲಿ ಎಲ್ಲೋ ಒಂದು ಪವಿತ್ರ ಅರ್ಥವಂತಿಕೆಗಳು ಇರುತ್ತವೆ ಎಂದು ನಾವು ಭಾವಿಸುತ್ತೇವೆ. ವಿಮರ್ಶಾತ್ಮಕವಾಗಿ ಕೃತಿಯೊಂದನ್ನು ಪರಿಭಾವಿಸುವುದು ಎಂದರೇನು? ಕೃತಿಯೊಂದರಲ್ಲಿ ಅಡಕವಾಗಿರುವ ಸೂಚನೆಗಳನ್ನು, ಅದರ ಆಶಯಗಳನ್ನು, ಅದರಲ್ಲಿರುವ ಸೌಂದರ್ಯಾತ್ಮಕವಾದ ಗುಣಗಳನ್ನು ನಾವು ಪರಿಭಾವಿಸುವುದು ಎಂದರ್ಥ. ಒಬ್ಬ ಬರಹಗಾರನ ಗೈರು ಹಾಜರಿಯಲ್ಲಿಯೂ ಕೃತಿಗಳು ಮುಕ್ತವಾಗಿರುತ್ತವೆ. ಓದುಗನಿಗಾಗಿ ತೆರೆದುಕೊಳ್ಳುತ್ತವೆ. ಹೀಗಾಗಿಯೇ ಒಂದು ಬರವಣಿಗೆಯ ಆಧಾರದಿಂದಲೇ ಒಬ್ಬ ಬರಹಗಾರನ ಸ್ಥಾನವನ್ನು ನಿರ್ಣಯಿಸುವುದು ಬಹಳ ಸಂದರ್ಭದಲ್ಲಿ ಕಷ್ಟ. ಬರಹವೊಂದು ಬರಹಗಾರನನ್ನು ಒಂದು ರೀತಿಯಲ್ಲಿ ಒಂದು ಕಡೆ ನಿಲ್ಲುವಂತೆ ನಿರ್ದೇಶಿಸುತ್ತದೆಯೆ? ಬರವಣಿಗೆಯು ಒಬ್ಬ ಬರಹಗಾರನನ್ನು ನಿರ್ದಿಷ್ಟವಾಗಿ ಕಲ್ಪಿಸಿಕೊಳ್ಳವಂತೆ ಅವಕಾಶವನ್ನು ನೀಡುತ್ತದೆಯೆಂದು ಮಾತ್ರವೇ ಹೇಳಬಹುದು.

ಸಾಹಿತ್ಯದಲ್ಲಿ ನಾವು ಕೆಲವರನ್ನು ಖ್ಯಾತನಾಮರು ಹೆಸರಾಂತ ಲೇಖಕ ಇತ್ಯಾದಿ ಕರೆಯುತ್ತೇವಷ್ಟೆ? . ಹಾಗೆಯೇ ಹೆಸರಿನ ಮುಖಾಂತರವೇ ನಾವು ಕೃತಿಗಳನ್ನು ಕೂಡಾ ಗುರುತಿಸುತ್ತೇವೆ. ಉದಾಹರಣೆಗೆ ಪಂಪನ ಕೃತಿಗಳು, ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಗಳು ಇತ್ಯಾದಿ. ತೀರಾ ಸಾಮಾನ್ಯ ಹೆಸರುಗಳು ಮತ್ತು ಅವುಗಳ ಕ್ರಿಯಾತ್ಮಕ ಸ್ವರೂಪಕ್ಕೂ ಬರಹಗಾರರ ಹೆಸರು ಮತ್ತು ಅದರ ಕ್ರಿಯಾತ್ಮಕ ಸ್ವರೂಪಕ್ಕೂ ವ್ಯತ್ಯಾಸವಿದೆ. ಪಂಪನ ಕೃತಿಗಳು ಎಂದು ಗುರುತಿಸುವಾಗಲೇ ಬರಹಗಾರ ಮತ್ತು ಬರಹದ ನಡುವಣ ಸಂಬಂಧವು ನಿರ್ಣೀತವಾಗುತ್ತದೆ. ತೀರಾಸಾಮಾನ್ಯವಾದ ಹೆಸರು ಮತ್ತು ಅದರ ಕ್ರಿಯೆಯ ಸ್ವರೂಪವು ಇನ್ನೊಂದಾಗುತ್ತದೆ. ಬರಹಗಾರರ ಸಂದರ್ಭದಲ್ಲಿ ಅವರ ಹೆಸರಿಗೂ ಬರವಣಿಗೆಗೂ ವಿಶಿಷ್ಟವಾದ ಸಂಬಂಧವನ್ನು ಕಲ್ಪಿಸಲಾಗುತ್ತದೆ.

ಕೃತಿಯ ಮುಖಾಂತರ ಕೃತಿಕಾರನನ್ನು ಗುರುತಿಸುವುದೇನೋ ನಿಜವೆ. ಆದರೆ ಕೃತಿಯ ಲೇಖಕನೆಂಬ ಸಂಗತಿಯನ್ನು ಗುರುತಿಸುವುದು ಬಹಳ ಸುಲಭವಾದ ಸಂಗತಿಯೇನೂ ಅಲ್ಲ. ಕೃತಿ ಕಾರನಿಗೆ ನಾವು ಕೊಡುವ ಗೌರವವೂ ಕೂಡಾ ಅಷ್ಟೇ . ಬರಹಗಳ ಮುಖಾಂತರ ಕುವೆಂಪು ಅವರನ್ನು ಗುರುತಿಸುವುದಕ್ಕೂ. ವ್ಯಕ್ತಿಯಾಗಿ ಕುವೆಂಪು ಅವರನ್ನು ಗುರುತಿಸುವುದಕ್ಕೂ ವ್ಯತ್ಯಾಸವಿದೆ. ವ್ಯಕ್ತಿಯಾಗಿ ಕುವೆಂಪು ಅವರನ್ನು ಗುರುತಿಸುವುದೆಂದರೆ ಅದು ಕುವೆಂಪು ಅವರ ಬಾಲ್ಯ, ಅವರ ಸಾಂಸಾರಿಕ ಜೀವನ ಎಲ್ಲವೂ ನಮಗೆ ಮುಖ್ಯವಾಗಬೇಕು. ಆದರೆ ಬರಹಗಾರರಾದ ಕುವೆಂಪು ಅವರನ್ನು ಗುರುತಿಸುವುದೆಂದರೆ ಕುವೆಂಪು ಅವರ ಬರಹಗಳ ಮುಖಾಂತರವೇ ಅವರನ್ನು ಗುರುತಿಸುವುದು ಎಂದರ್ಥ. 'ಕುಪ್ಪಳ್ಳಿ ವೆಂಕಟಪ್ಪನವರ ಮಗ ಪುಟ್ಟಪ್ಪ ನವರಿಗೂ, ಕುವೆಂಪುಗೂ ಇರುವ ಭಿನ್ನತೆಯಾದರೂ ಏನು ? ಕುವೆಂಪು ಹೇಳದೆ ಉಳಿದ ಸಂಗತಿಗಳು ಕೂಡಾ ಬಹಳ ಇವೆ ಅಲ್ಲವೇ?.

ಲೇಖಕರು ಮತ್ತು ಅವರ ಕೃತಿಗಳು ಗ್ರಂಥಾಲಯದಲ್ಲಿ ಏನಾಗುತ್ತಿವೆ? ಕೇವಲ ಇಂಡೆಕ್ಸ್‌ಕಾರ್ಡ್‌ಗಳು (ಪಟ್ಟಿಕೆಗಳು) ತಾನೆ? ಕುವೆಂಪು ಅವರು ಗ್ರಂಥಕರ್ತರಾಗಿ ಅವರು ಕನ್ನಡದ ಹೆಮ್ಮೆಯ ಲೇಖಕರೇ ಆಗಿರಬಹುದು. ಆದರೆ ಗ್ರಂಥಾಲಯದ ಕೆಟಲಾಗ್‌ಗಳಲ್ಲಿ ಅವರೂ ಉಳಿದ ಲೇಖಕರ ಸಮಾನ. ಅಂದರೆ ಗ್ರಂಥಾಲಯ ಪಟ್ಟಿಕೆಗಳ ವಿಷಯಗಳಲ್ಲಿ ಕುವೆಂಪು ಬೇರೆಯಲ್ಲ; ಪುಟ್ಟಪ್ಪ ಬೇರೆಯಲ್ಲ. ಅನಿಕೇತನ ಬೇರೆಯಲ್ಲ ಅನಿರುದ್ಧ ಬೇರೆಯಲ್ಲ. ಈ ರೀತಿಯ ಗ್ರಂಥಾಲಯದ ಪಟ್ಟಿಕೆಗಳು ಸೂಚಿಸುವ ಸಂಗತಿಗಳನ್ನು ಗಮನಿಸಿ ಯಾವುದೇ ಪುಸ್ತಕವನ್ನು ಇಂಥವರು ಬರೆದಿದ್ದಾರೆ, ಎಂದಷ್ಟೆ ತಾನೆ ? ಅಂದರೆ : ನಾವು ಓದುವ ಪುಸ್ತಕಗಳು ಗ್ರಂಥಾಲಯದಲ್ಲಿ ಲೇಖಕರ ಹೆಸರನ್ನು ಕೇವಲ ಒಂದು ಸೂಚನೆಯಾಗಿ ಮಾತ್ರವೇ ಬಳಸುತ್ತದೆ. ಅದರಾಚೆಗೆ ಏನೂ ಅಲ್ಲ. ಬರಹಗಾರನ ಹೆಸರು ಎನ್ನುವುದು ಒಂದು ಕೃತಿಯ ಉದ್ದಗಲಕ್ಕೂ ಪ್ರವಹಿಸುವ ಕ್ರಿಯೆಯನ್ನು ಸೂಚಿಸುವುದಿಲ್ಲ. ಎಲ್ಲೋ ಒಂದು ಕಡೆ ಲೇಖಕನ ಹೆಸರು ನಮೂದಿತವಾಗುತ್ತದೆ ಅಷ್ಟೆ. ಒಂದು ಪುಸ್ತಕದ ಅಸ್ತಿತ್ವಕ್ಕೆ ಮಾತ್ರ ಲೇಖಕನ ಹೆಸರು ಬೇಕಾಗುತ್ತದೆ. ಲೇಖಕನ ಹೆಸರು ಎನ್ನುವುದು ಬರವಣಿಗೆಯ ಒಟ್ಟು ಮಾದರಿಯನ್ನು ಸೂಚಿಸುವುದಿಲ್ಲ.

ಯಾವುದೇ ಕೃತಿಯ ಒಳಚೌಕಟ್ಟಿನೊಳಗೆ ಲೇಖಕನ ಹೆಸರು ಎನ್ನುವುದು ಸಂವಾದಗಳನ್ನು ಸೂಚಿಸುವುದಿಲ್ಲ. ಕೃತಿಯ ಒಳಚೌಕಟ್ಟಿನಲ್ಲಿ ಮಾತ್ರ ರೂಪುಗೊಳ್ಳುವ ಭಾಷಿಕ ಕ್ರಮಕ್ಕೆ, ಅದರ ಅಕ್ಷರಗಳಿಗೆ ಲೇಖಕನು ಕಾನೂನು ಕ್ರಮದಲ್ಲಿ ತನ್ನ ಹಕ್ಕು ಸ್ಥಾಪನೆ ಮಾಡಲಾಗುವುದಿಲ್ಲ. ಹೀಗಾಗಿ ಲೇಖಕನ ಹೆಸರು ಮತ್ತು ಕೃತಿ ಇವುಗಳ ನಡುವಿನ ಸಂಬಂಧವು ಆಧುನಿಕ ಸಂದರ್ಭದಲ್ಲಂತೂ ಕೃತಿ ಒಬ್ಬನಿಂದ ಇನ್ನೊಬ್ಬನ ಕೈಗತಕ್ಕೆ ಹಾಕಿಕೊಂಡು ಹೋಗುವಾಗ ಅನೇಕ ರೀತಿಯ ಅವಸ್ಥಾಂತರಗಳು ಉಂಟಾಗುತ್ತವೆ.

ಒಂದು ಕೃತಿಯು ಸೃಷ್ಟಿಸುವ ಸಂವಾದಗಳನ್ನು ಬರಹಗಾರನ ಹಿನ್ನಲೆಯಲ್ಲಿ ಯೋಚಿಸುವಾಗ ಕೆಲವು ಚರ್ಚೆಗಳು ಸಾಧ್ಯ. ಬರಹಗಾರರು ಒಂದು ಕೃತಿಗೆ ಪಡೆದುಕೊಳ್ಳುವ ಸ್ವಾಮ್ಯ ಚಾರಿತ್ರಿಕವಾಗಿ ಅದರ ದಾಖಲೆ. ಕೃತಿಸ್ವಾಮ್ಯ ಎನ್ನುವುದು ಒಂದು ರೀತಿಯ ಲೇಖಕನ ಹಕ್ಕುಸ್ಥಾಪನೆಯ ವಿಷಯವನ್ನು ಪಡೆದುಕೊಂಡಿದೆ. ಇದರಿಂದಾಗಿ ಆಧುನಿಕ ಸಂದರ್ಭದಲ್ಲಿ ಒಂದು ಪುಸ್ತಕದಿಂದ ಒಬ್ಬ ಲೇಖಕನಿಗೆ ಕೆಲವು ರೀತಿಯ ಅನುಕೂಲಗಳು ದೊರೆಯಬಹುದು.

ಯಾವುದೇ ಬರಹಗಾರನ ಕೃತಿಯು ಸೃಷ್ಟಿಸುವ ಸಂವಾದವು ವಿಶ್ವಾತ್ಮಕ ಮತ್ತು ನಿರ್ದಿಷ್ಟ ಮಾದರಿಯದಾಗಿರುವುದಿಲ್ಲ, ಇದರಿಂದಾಗಿ ಒಬ್ಬ ಲೇಖಕನನ್ನು ಕೃತಿಯ ಸ್ಪಷ್ಟ ರೂಪಕವಾಗಿ ಗುರುತಿಸಲು ಬರುವುದಿಲ್ಲ. ಒಬ್ಬ ಕೃತಿಕಾರನು ಒಂದು ಕೃತಿಯಲ್ಲಿ ನಿರ್ದಿಷ್ಟ ಚಾರಿತ್ರಿಕ ಸತ್ಯವನ್ನು ಹೇಳುತ್ತಿದ್ದಾನೆಂದು ಹೇಳಲೂ ಬರುವುದಿಲ್ಲ.

ಕೆಲವು ವೈಜ್ಞಾನಿಕ ಚಿಂತನೆಯ ಬರಹಗಳಲ್ಲಿ ಮತ್ತು ವೈಜ್ಞಾನಿಕ ಸತ್ಯಗಳ ಲೇಖಕನ ಹಕ್ಕು ಸ್ವಾಮ್ಯದ ಪ್ರಶ್ನೆಗಳು ಅಷ್ಟೊಂದು ಮುಖ್ಯವಲ್ಲ. ಆದರೆ ಸಾಹಿತ್ಯದಲ್ಲಿ ಮಾತ್ರವೇ ಲೇಖಕ ಮತ್ತು ಕೃತಿ ಎನ್ನುವ ಸಮಸ್ಯೆಯನ್ನು ಎತ್ತಿಕೊಂಡು ಮಾತನಾಡುತ್ತಿದ್ದೇವೆ. ಮಾತ್ರವಲ್ಲ; ಲೇಖಕನಿಗೂ ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿಕೊಳ್ಳುತ್ತೇವೆ.

ಸಾಹಿತ್ಯದ ಮತ್ತೊಂದು ಸಮಸ್ಯೆಯನ್ನು ನೋಡಿ: ಅದರ ಚರ್ಚೆ ಶುರುವಾಗುವುದು ಸೃಜನಶೀಲತೆ ಎನ್ನುವ ಪರಿಕಲ್ಪನೆಯಲ್ಲಿ. ಆ ಪರಿಕಲ್ಪನೆಯು ಸಾಹಿತ್ಯ ಕೃತಿಗಳನ್ನು ಮತ್ತು ಸಾಹಿತ್ಯರೂಪಗಳನ್ನು ಮೇಲಕ್ಕೆ ಕೊಂಡೊಯ್ಯುತ್ತದೆ. ಆದರೆ ಈ ಸಮಸ್ಯೆ ವೈಜ್ಞಾನಿಕ ಚಿಂತನೆಯ ಬರಹಗಳಲ್ಲಾಗಲೀ ತತ್ತ್ವಜ್ಞಾನದ

ಬರಹಗಳಲ್ಲಾಗಲಿ ಇಲ್ಲ. ನಾವು ಓದುತ್ತಿರುವ ಕೃತಿಗಳ ಮೂಲಕ ಲೇಖಕನನ್ನು ಸಂತನಂತೆ, ಋಷಿಯಂತೆ ನೋಡಲು ಪ್ರಯತ್ನಿಸುತ್ತಿದ್ದೇವೆ.

ಈ ಎಲ್ಲಾ ಸಮಸ್ಯೆ ಇದ್ದಾಗಲೂ ನಾವು ಕೆಲವು ಸಮಸ್ಯೆಗಳ ಬಗೆಗೆ ಗಮನ ಹರಿಸಿಲ್ಲ. ಒಬ್ಬನೇ ಲೇಖಕನ ಬೇರೆ ಬೇರೆ ಪುಸ್ತಕಗಳು ಯಾಕೆ ವಿಭಿನ್ನವಾಗಿರುತ್ತವೆ? ಬೇರೆ ಬೇರೆ ಪುಸ್ತಕಗಳಲ್ಲಿ ಒಬ್ಬನೇ ಲೇಖಕನು ಬೇರೆ ಬೇರೆ ವಿಚಾರಗಳ ಪ್ರಸ್ತಾಪವನ್ನು ಯಾಕೆ ಪ್ರತಿಪಾದಿಸುತ್ತಾನೆ? ಒಬ್ಬನೇ ಲೇಖಕನ ಬೇರೆ ಬೇರೆ ಪುಸ್ತಕಗಳಲ್ಲಿ ಬೇರೆ ಬೇರೆ ಶೈಲಿ ಯಾಕೆ ಬರುತ್ತದೆ?

ಈ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದಕ್ಕೆ ಲೇಖಕನನ್ನೂ ನಾವು ಎಷ್ಟರ ಮಟ್ಟಿಗೆ ಆಶ್ರಯಿಸಬೇಕು? ಹಾಗೆ ನೋಡಿದರೆ ಲೇಖಕನ ಬರವಣಿಗೆಯು ಶುದ್ಧವಾಗಿ, ಪವಿತ್ರವಾಗಿ ಓದುಗರಿಗೆ ದೊರೆಯುತ್ತದೆ. ಎಂದು ಹೇಳಲು ಬರುವುದಿಲ್ಲ. ಲೇಖಕನ ವ್ಯಕ್ತಿತ್ವ ಕೃತಿಯಿಂದ ಹೊರಗಡೆಯೇ ಉಳಿಯುತ್ತದೆ. ಈಗಾಗಲೇ ಸಾಹಿತ್ಯ ಕೃತಿಗಳ ಮೂಲಕ ಲೇಖಕನ ವ್ಯಕ್ತಿತ್ವ ಎನ್ನುವುದನ್ನು ಏನು ಕಟ್ಟಿದ್ದೇವೆಯೋ ಅದು ತಪ್ಪಾಗಿಯೂ ಇರಬಹುದು ಮತ್ತು ಲೇಖಕನ ಸಮಗ್ರ ವ್ಯಕ್ತಿತ್ವ ಎನ್ನುವುದು ಒಂದು ಕೃತಿಯಲ್ಲಿ ಸಾಕ್ಷೀಭೂತವಾಗಿ ನಮಗೆ ದೊರೆಯುತ್ತದೆ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಒಬ್ಬ ಲೇಖಕನು ತಾತ್ತ್ವಿಕತೆಯನ್ನು ಎಷ್ಟರ ಮಟ್ಟಿಗೆ ಆಶ್ರಯಿಸಬೇಕು? ಹಾಗೆಯೇ ಕೃತಿಯ ತಾತ್ವಿಕಗ್ರಹಿಕೆ ಎಂದು ಹೇಳಿದರೆ ನಾವು ಆ ಮುಖಾಂತರ ಲೇಖಕನ ವ್ಯಕ್ತಿತ್ವಕ್ಕೆ ಮಿತಿಯನ್ನು ಹೇರುತ್ತೇವೆಯೇ? ಮತ್ತು ಒಬ್ಬ ಲೇಖಕನ ವಿಚಾರ ಪ್ರಣಾಲಿ ಎಂದರೆ ಇಷ್ಟೇ ಎಂದು ಪ್ರತಿಪಾದಿಸುವುದು ಅರ್ಥಹೀನವಲ್ಲವೆ?

ಒಂದು ಕೃತಿಯ ಮೂಲಕ ಒಬ್ಬ ಲೇಖನಕನ್ನು ಹೊಗಳುವುದಾಗಲಿ, ಒಂದು ಕೃತಿಯನ್ನು ನೋಡಿ ಲೇಖಕನನ್ನು ದಾರ್ಶನಿಕನೆಂದು ಗುರುತಿಸುವುದಾಗಲೀ ಈ ದೃಷ್ಟಿಯಿಂದ ಲೇಖಕನನ್ನು ಆದರ್ಶೀಕೃತ ಸಂಕೇತವಾಗಿ ಕಾಣುವ ಒಂದು ಹುನ್ನಾರವಾಗಿರುತ್ತದೆ ಅಷ್ಟೇ. ಲೇಖಕನ ವ್ಯಕ್ತಿತ್ವ ಮತ್ತು ಬರವಣಿಗೆ ಎನ್ನುವುದು ಶುದ್ಧವಾಗಿ ಸಾಹಿತ್ಯದ ಸತ್ಯವಲ್ಲ ಈ ಎಲ್ಲ ದೃಷ್ಟಿಗಳಿಂದ ಬರಹಗಾರ ಮತ್ತು ಬರಹಗಳ ಸಂಬಂಧ ಸರಳವಾದುದಲ್ಲ, ಬರವಣಿಗೆ ಎನ್ನುವುದು ಲೇಖಕನ ಅಂತ:ಕರಣದ ಸತ್ಯವೂ ಅಲ್ಲ.

ಕೊನೆಗೂ ಕೇಳಬೇಕಾಗಿರುವುದೇನೆಂದರೆ, ಯಾವುದನ್ನು ಲೇಖಕ ನಿಜವಾಗಿ ಮಾತನಾಡುತ್ತಿದ್ದಾನೆ? ಮತ್ತು ಯಾವುದು ಲೇಖಕನನ್ನು ಬರೆಯುವಂತೆ ಮಾಡಿದೆ?.

**ಆಕರ:**


1. Michel Foucault What is an author ? (ಲೇಖನ)'.
2. Roland Barthes ' "From ,work to text "

## ಅಧ್ಯಾಯ-10

# ಭಾಷೆಯೆಂದರೆ ಅದು ಕೇವಲ ಶಾಸ್ತ್ರದ ಪ್ರಶ್ನೆಯಲ್ಲ

ಭಾಷೆಯ ನಿಯಮ ಮತ್ತು ಮಾತಿನ ಕ್ರಮ ಬೇರೆ. ಹಾಗೆಯೇ ಭಾಷೆ ಮತ್ತು ಅದರ ಸಂವಹನ ಕ್ರಮವು ಬೇರೆಯೆಂದು ನಾವು ತಿಳಿಯುತ್ತೇವೆ. ಅನೇಕ ಸಂದರ್ಭದಲ್ಲಿ ನಾವು ಮಾತಾಡಿದ್ದನ್ನು ಹಾಗೆಯೇ ಬರೆಯಲಾಗುವುದಿಲ್ಲ. ಇದರಿಂದಾಗಿ ಭಾಷೆಯ ಬಳಕೆಯ ಬಗ್ಗೆ ಹೆಚ್ಚಿನ ಸಾಹಿತ್ಯ ಸಿದ್ಧಾಂತಗಳು ಚರ್ಚಿಸುತ್ತಲೇ ಬಂದಿವೆ. ಕೆಲವು ಸಂದರ್ಭಗಳಲ್ಲಿ ಭಾಷೆಯು ಪಡೆದುಕೊಳ್ಳುವ ನಿಯಮಗಳ ಬಗೆಗೂ ಚರ್ಚೆಗಳು ನಡೆದಿವೆ. ಮಾತು ಬೇರೆ ಬರವಣಿಗೆ ಬೇರೆ ಎನ್ನುವ ದ್ವಂದ್ವವಾದಿ ನಿಲುವಿನ ಬಗೆಗೆ ನಿರಚನ ಸಿದ್ಧಾಂತವು ಚರ್ಚಿಸುತ್ತದೆ.

ಭಾಷೆಯ ನಿಯಮಗಳು, ವ್ಯಾಕರಣ, ನಿಘಂಟು ಇತ್ಯಾದಿಗಳು ಒಂದು ರೀತಿಯ ಭಾಷಿಕ ಕ್ರಮದ ಮೇಲೆ ನಿರ್ದಿಷ್ಟ ವಲಯವನ್ನು ನಿರ್ಮಿಸುತ್ತವೆ, ಅಷ್ಟೇ ಅಲ್ಲ ಭಾಷಾಶಾಸ್ತ್ರದಲ್ಲಿಯೂ ಭಾಷೆಯ ಬಗೆಗೆ ವರ್ಗೀಕರಣದ ನಿಯಮಗಳು ನಿರಂತರವಾಗಿ ನಡೆಯುತ್ತಲೇ ಬಂದಿವೆ. ದ್ರಾವಿಡಭಾಷೆಗಳು ಅದರಲ್ಲಿ ಉತ್ತರ ದ್ರಾವಿಡ ಭಾಷೆಗಳು, ದಕ್ಷಿಣ ದ್ರಾವಿಡಭಾಷೆಗಳು, ಮಧ್ಯದ್ರಾವಿಡ ಭಾಷೆಗಳು ಇತ್ಯಾದಿ ವರ್ಗೀಕರಿಸುವಾಗ ಭಾಷೆಯ ವರ್ಗೀಕರಿಸುವುದೆ ಅಲ್ಲದೆ ಅದನ್ನು ಒಂದು ಕೌಟುಂಬಿಕ ಚೌಕಟ್ಟಿನೊಳಗೆ ಸೇರಿಸುವ. ಸಹಜವಾಗಿಯೇ ಒಂದು ನಿಯಮಕ್ಕೆ ಅನ್ವಯಿಸುವ ಪ್ರಯತ್ನವನ್ನು ಮಾಡುತ್ತೇವೆ. ಭಾಷೆಯ ಕಲ್ಪಿತವಾದ ಚರಿತ್ರೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಭಾಷೆಯನ್ನು ಪುನರ್ರಚಿಸುವ ಪ್ರಯತ್ನವನ್ನು ಮಾಡುತ್ತೇವೆ. ಭಾಷೆಯ ಚರಿತ್ರೆಯನ್ನು ನಾವು ಪುನರ್ರಚಿಸಿಕೊಳ್ಳಲು ಮನಸ್ಸು ಮಾಡುವಾಗ ಪುನರ್ರಚನೆಯ ಪ್ರಯತ್ನವು ಸಹಜವಾಗಿಯೇ ರೂಪುಗೊಂಡಿರುವುದಿಲ್ಲ. ಅದಕ್ಕೆ ಬೇರೆ ಬೇರೆ ರೀತಿಯ ಚೌಕಟ್ಟುಗಳು ಕೂಡಾ ನಿರ್ಮಾಣಗೊಂಡಿರುತ್ತವೆ.

ಉದಾಹರಣೆಗೆ ಈ ರೀತಿಯ ವರ್ಗೀಕರಣಗಳನ್ನು ಮಾಡುವಾಗಲೇ ನಮ್ಮ ಮನಸ್ಸಿನಲ್ಲಿ ಭಾಷೆಯ ಸ್ವರೂಪದ ಬಗೆಗೆ ಕೆಲವು ಪ್ರಮೇಯಗಳು ಇರುತ್ತವೆ. ಅವುಗಳನ್ನು ನಾವು ದ್ವಂದ್ವಮುಖೇನ ಕಂಡುಕೊಳ್ಳಲು ಯತ್ನಿಸುತ್ತೇವೆ.

ಆರ್ಯರ ಭಾಷೆ × ದ್ರಾವಿಡರ ಭಾಷೆ

ಸಹಜ ಭಾಷೆ × ಕೃತಕವಾದ ಭಾಷೆ. (ಗ್ರಂಥಸ್ಥ)

ಮಾತಿನಭಾಷೆ × ಬರವಣಿಗೆಯ ಭಾಷೆ.

ಹೆಣ್ಣಿನ ಭಾಷೆ × ಗಂಡಿನ ಭಾಷೆ.

ಇತ್ಯಾದಿ. ಈ ತರಹ ವರ್ಗೀಕರಿಸಿಕೊಂಡು ಭಾಷೆಯ ಕ್ರಮದ ಬಗ್ಗೆ ನಮ್ಮ ಸರಳ ದ್ವಂದ್ವದ ನಿಯಮಗಳು ತಾತ್ವಿಕವಾಗಿಯೇ ಇರಬೇಕೆಂದೇನೂ ಇಲ್ಲ. ಅನೇಕ ಸಂದರ್ಭಗಳಲ್ಲಿ ನಾವು ಈ ವರ್ಗೀಕರಣಗಳನ್ನು ಸರಳವಾದ ನಮ್ಮದೇ ಪ್ರಮೇಯಗಳನ್ನು ಆಧರಿಸಿಕೊಂಡು - ನಮ್ಮ ಅನುಕೂಲಕ್ಕೆ ಹೇಗೆ ಬೇಕೋ ಹಾಗೆ ಅನ್ವಯಿಸಿಕೊಂಡೇ ರೂಪಿಸಿರುತ್ತೇವೆ. ಈ ವರ್ಗೀಕರಣಗಳಿಗೆ ಅನೇಕ ರೀತಿಯ ಮಿತಿಗಳಿವೆ ಎಂಬುದು ನಿರ್ವಿವಾದದ ಸಂಗತಿಯಾಗಿದೆ..

ಈ ವರ್ಗೀಕರಣಗಳು ಅನೇಕ ಸಂದರ್ಭದಲ್ಲಿ ತಾತ್ವಿಕ ಮುಖಾಮುಖಿಯ ಪ್ರಶ್ನೆಯಾಗಿರದೆ,

ಚಾರಿತ್ರಿಕವಾದ ಆಂಶಿಕ ಸಂಗತಿಗಳನ್ನು ತನ್ನೆದುರು ಇಟ್ಟುಕೊಂಡಿರುತ್ತವೆ. ಇದರಿಂದಾಗಿ ಈ ವರ್ಗೀಕರಣಗಳು ರೂಪಿಸಿಕೊಳ್ಳುವ ನಿಯಮಗಳಿಗೆ ಇರುವ ತರ್ಕಗಳು ಕೂಡಾ ಹೆಚ್ಚು ಕಡಿಮೆ ಸಾಂಪ್ರದಾಯಿಕವಾದ ರೂಪವನ್ನು ಧರಿಸಿರುತ್ತವೆ. ಈ ವರ್ಗೀಕರಣಗಳ ಹಿಂದಿರುವ ತತ್ತ್ವಜ್ಞಾನವು ಕೂಡಾ ಭಾಷೆಯ ಮೇಲೆ ನಿರ್ದಿಷ್ಟ ನಿಯಮಗಳನ್ನು ಹೇರುತ್ತಿರುತ್ತದೆ. ಭಾಷೆಯ ನಿಯಮಗಳನ್ನು ನಾವು ಈ ರೀತಿಯ ವರ್ಗೀಕರಣಗಳ ಮೂಲಕ ನೋಡುವಾಗ ಅದು ಅಭಿವ್ಯಕ್ತಗೊಂಡ ನಿಯಮಗಳನ್ನೇ ಕೇಂದ್ರವಾಗಿರಿಸಿಕೊಂಡು ಯೋಚಿಸುತ್ತೇವೆ. ಭಾಷೆಗಳನ್ನು ಬೇರೆ ಬೇರೆ ಗುಂಪುಗಳನ್ನಾಗಿ ನಾವು ವರ್ಗೀಕರಿಸಿಕೊಂಡು ನೋಡುವಾಗ ಅದರ ಆಂತರಿಕ ಸ್ವರೂಪವನ್ನು ನಮ್ಮ ಗಮನದಲ್ಲಿ ಇರಿಸಿಕೊಂಡು ಅದಕ್ಕೊಂದು ಚರಿತ್ರೆಯನ್ನು ಕಲ್ಪಿಸಿಕೊಳ್ಳುವುದೆಂದರೆ ನಮ್ಮ ನಮ್ಮ ಪ್ರಮೇಯಗಳನ್ನೇ ಒಂದು ಖಚಿತ ತೀರ್ಮಾನದಂತೆ ಪರಿಭಾವಿಸಿಕೊಳ್ಳುವುದು. ಹಾಗೆ ನೋಡಿದರೆ ನಮ್ಮ ಅನೇಕರ ಆಲೋಚನೆಯು ಈ ರೀತಿಯ ವರ್ಗೀಕರಣವನ್ನು ಅವಲಂಬಿಸಿಕೊಂಡಿದೆಯೆ? ಮತ್ತು ಭಾಷಿಕ ಅಭಿವ್ಯಕ್ತಿಕ್ರಮಕ್ಕಿಂತಲೂ ಆಚೆಗೆ ನಮ್ಮ ನಮ್ಮ ಆಲೋಚನೆಗಳು ಅಂತಸ್ಥಗೊಂಡಿಲ್ಲವೆ? ಭಾಷೆಗೆ, ಅದರ ನಿಯಮಗಳಿಗೆ ಅನುಕ್ರಮತೆಯು ಇದೆಯೆಂಬುದೇ ಪ್ರಶ್ನಾರ್ಹ. ಆಲೋಚನೆಯ ಸ್ವಾತಂತ್ರ್ಯವೆನ್ನುವುದು ಇದರಾಚೆಗೂ ಸರಿಯುತ್ತದೆ.

ಭಾಷೆಯ ನಿಯಮಗಳ ಬಗೆಗೆ ಇರುವ ಸರಳ ಸಮೀಕರಣವನ್ನು ನೋಡಿ: **ಸೂಚಕ ಸೂಚನೆ ಸೂಚಿತ** . ಸೂಚಿತನಿಗೆ ಭಾಷೆಯು ಸಮರ್ಪಕವಾಗಿ ತಿಳಿಯಬೇಕಾದರೆ ಭಾಷೆಯು ನಿರ್ದಿಷ್ಟವಾದ ನಿಯಮಗಳನ್ನು ಅವಲಂಬಿಸಿಕೊಂಡಿರಬೇಕೆಂದು, ತರ್ಕವಿಲ್ಲದಿದ್ದರೆ ಭಾಷೆಯ ರೂಪವು ಪೂರ್ಣವಲ್ಲವೆಂದು ನಾವು ಪ್ರತಿಪಾದಿಸುತ್ತೇವೆ. ತರ್ಕವು ಈ ಅರ್ಥದಲ್ಲಿ ಭಾಷೆಗೆ ಬಂಧಿತವಾಗಿರುವಂಥದ್ದು, ತರ್ಕವು ತಲೆಕೆಳಗಾಗುವುದು ಅಲಂಕಾರಗಳ ಸಂದರ್ಭದಲ್ಲಿ ಮಾತ್ರ. ಯಾಕೆಂದರೆ ರೂಪಕ ಮೊದಲಾದ ಅಲಂಕಾರಗಳಲ್ಲಿ ನಾವು ಕೇವಲ ತರ್ಕವನ್ನು ಮಾತ್ರ ಕಾಣಲಾರೆವು. ಅಲ್ಲಿ ಅಮೂರ್ತವಾದುದನ್ನು : ಅತಾರ್ಕಿಕವಾದುದನ್ನು ಭಾಷೆಯ ಚೌಕಟ್ಟಿನಲ್ಲಿ ಬಳಸುವ ಕಲ್ಪನೆಯ (imagination) ಪ್ರಶ್ನೆಯೂ ಅಷ್ಟೇ :ಇದು ಭಾಷಿಕವಾದ ಸರಳ ವ್ಯವಹಾರವನ್ನು ದಾಟುತ್ತದೆ. ಈ ದೃಷ್ಟಿಯಿಂದ ಭಾಷೆಗೆ ತರ್ಕವಿದೆ. ನಿಯಮವಿದೆ, ರಾಚನಿಕವಾದ ಸ್ವರೂಪವಿದೆ ಎಂದು ನಾವು ಎಷ್ಟೇ ಹೇಳಿದರೂ ಭಾಷೆಯ ಆಚೆಗೆ ಅನೇಕ ಸತ್ಯಗಳು ಹಾಗೆಯೇ ಉಳಿಯುತ್ತವೆ.

ಭಾಷೆಯು ನಮ್ಮ ಆಲೋಚನೆಯ ಪ್ರತೀಕವೆಂದು ಕರೆದರೂ ಅನೇಕ ಸಂದರ್ಭದಲ್ಲಿ ಅದು ಆಲೋಚನೆಯನ್ನು ಯಥಾವತ್ತಾಗಿ ಪ್ರತಿಬಿಂಬಿಸುವುದಿಲ್ಲ ಭಾಷೆಯಲ್ಲಿ ನಾವು ಬಳಸುವ ಸಂಕೇತಗಳು , ಚಿಹ್ನೆಗಳು ಎಷ್ಟರಮಟ್ಟಿಗೆ ನಮ್ಮ ಆಲೋಚನೆಯನ್ನು ಹಿಡಿದಿಡಲು ಸಾಧ್ಯ? ನಮ್ಮೆದುರು ಇರುವ 'ಸತ್ಯ' ವನ್ನೇ ಆಗಲಿ ನಾವು ನಮ್ಮ ಭಾಷೆಯಲ್ಲಿ ಯಥಾವತ್ತಾಗಿ ಒಡಮೂಡಿಸಲು ಸಾಧ್ಯವೆ? ಒಂದು ಭಾಷೆಯಲ್ಲಿ ವ್ಯಕ್ತವಾಗುವ ವಸ್ತುವೇ ನಿಜವನ್ನು ಅರ್ಥಪೂರ್ಣವಾಗಿ ವ್ಯಕ್ತಪಡಿಸಬಲ್ಲುದೆ? ಹಾಗೆ ನೋಡಿದರೆ ನಮ್ಮ ಆಲೋಚನೆ ಮತ್ತು ಭಾಷೆ ಎರಡನ್ನೂ ಹೊರಗಣ ಸಂಗತಿಗಳು ನಿಯಂತ್ರಿಸುತ್ತಿರುತ್ತವೆ. ನಮ್ಮೆಲ್ಲರ ಭಾಷಿಕ ಪರಂಪರೆಯೇ ನಿರ್ದಿಷ್ಟ ವಿಷಯಗಳನ್ನು : ಸತ್ಯವನ್ನು ಪ್ರತಿಪಾದಿಸುತ್ತದೆಯೆಂದು ಹೇಳಲು ಬರುವುದಿಲ್ಲ. 'ಗಟ್ಟಿಯಾದ ಕಲ್ಲು' 'ಗಟ್ಟಿಯಾದ ಮೊಸರು'ಎಂದು ಹೇಳುವಾಗ 'ಗಟ್ಟಿ ' ಎನ್ನುವುದೇ ಸಂವಾದಿಯಾದ 'ಸತ್ಯ'ಗಳನ್ನು ಪ್ರಸ್ತುತ ಪಡಿಸುತ್ತದೆ. ಹಾಗೆಯೇ 'ಮಾಮರ' ಮತ್ತು 'ಲತೆ'ಯೆನ್ನುವುದು ಗಂಡು ಹೆಣ್ಣಿನ ಸಂಬಂಧಗಳನ್ನು ನಿರ್ದೇಶಿಸುವಾಗಲೂ ಬಳಕೆಯಾಗುತ್ತದೆ. ಅಂದರೆ 'ಮಾಮರ'ಗಂಡಿನ ಸಂಕೇತವಾಗಿಯೂ 'ಲತೆ'ಯು ಹೆಣ್ಣಿನ ಪ್ರತೀಕವಾಗಿಯೂ ರೂಪುಗೊಂಡಿದೆ. 'ಮಾಮರ ಹೆಣ್ಣು. ಲತೆಯು ಗಂಡು ' ಎಂದು ಯಾರೂ ಹೇಳುವುದಿಲ್ಲ. ಭಾಷೆಯಲ್ಲಿ ವ್ಯಕ್ತಗೊಂಡಿರುವ

ರೂಪಕವುಯಾವ ಸತ್ಯವನ್ನು ಹೇಳುತ್ತದೆ? ಈ ರೀತಿಯ ರೂಪಕಗಳಲ್ಲಿಯೇ ನಾವು ವರ್ಗೀಕರಣವನ್ನು ಮಾಡಿಕೊಂಡು ಅದಕ್ಕೆ ನಿರ್ದಿಷ್ಟ ಅರ್ಥವನ್ನು ಹೇರಿದ್ದೇವೆ. ಇದೇ ಮಾತು 'ಹಾವು' 'ಮನೆ' ಮುಂತಾದ ಸಂಕೇತಗಳಿಗೂ ಅನ್ವಯವಾಗುತ್ತದೆ. ಈ ದೃಷ್ಟಿಯಿಂದ ಭಾಷೆಯು ಕೇವಲ ರಾಚನಿಕ ರೂಪದ, ನಿಯಮ ಬದ್ಧವಾದ ಚಟುವಕೆಯೆಂದು ನಾವೆಷ್ಟೇ ಪ್ರಬಲವಾಗಿ ಪ್ರತಿಪಾದಿಸಿದರೂ ಭಾಷೆಯೂ ಕೆಲವು ನಿರ್ಣಾಯಕವಾದ ಪರಿಕಲ್ಪನೆಗಳನ್ನು ರೂಢಿಸಿಕೊಂಡಿರುತ್ತದೆ. ಈಗಾಗಲೇ ಹೇಳಲಾಗಿರುವ ಉದಾಹರಣೆಗಳನ್ನು ಗಮನಿಸಿ: 'ಗಟ್ಟಿಮೊಸರು' ಗಟ್ಟಿಕಲ್ಲು ಮನೆ 'ಸರ್ಪ' - ಇವುಗಳು ಬೇರೆ ಬೇರೆ ರೀತಿಯ ಪ್ರಯೋಗಗಳಲ್ಲಿ ಇವು ಬೇರೆ ಬೇರೆ ಅರ್ಥಗಳನ್ನು ಹೊರಡಿಸುವುದು ಅದು ಕೇವಲ ವಾಕ್ಯದ ಕಾರಣದಿಂದಲ್ಲ.

ಈ ಕೆಳಗಿನ ಕೆಲವು ವಾಕ್ಯಗಳನ್ನು ಉದಾಹರಣೆಯಾಗಿ ನೋಡಬಹುದು :

1. ಗಟ್ಟಿಯಾದ ಕಲ್ಲಿನಿಂದ ಮೂರ್ತಿಯನ್ನು ಕೆತ್ತಲಾಗಿದೆ.
2. ಗಟ್ಟಿಯಾದ ಮೊಸರಿನಿಂದ ಊಟ ಮಾಡಿದನು.
3. ಗಟ್ಟಿಯಾದ ಮನುಷ್ಯ.
4. ಗಟ್ಟಿಯಾದ ಮನಸ್ಸುಳ್ಳವನು.

ಈ ವಾಕ್ಯಗಳಲ್ಲಿ ಪ್ರಯೋಗಕ್ಕೆ ಗುರಿಯಾಗಿರುವ ಗಟ್ಟಿ ಎನ್ನುವುದಕ್ಕೆ ಕೇವಲ ವಾಕ್ಯರಣದ ಅಥವಾ ನಿಘಂಟು ಸೂಚಿತ ಅರ್ಥ ಮಾತ್ರವೇ ಇಲ್ಲ. ಸಂದಿಗ್ಧತೆಯೂ ಕೂಡಾ ಈ ವಾಕ್ಯವನ್ನು ಅರ್ಥವಿಸಿಕೊಳ್ಳುವ ಪ್ರಕ್ರಿಯೆಯ ಮೇಲೆ ಪ್ರಭಾವವನ್ನು ಬೀರಿದೆ, ಹೀಗಾಗಿ, 'ಗಟ್ಟಿಯಾದ ಮೊಸರು' 'ಗಟ್ಟಿಯಾದ ಮನುಷ್ಯ' ಗಟ್ಟಿಯಾದ ಮನಸ್ಸು' ಎಂದು ಹೇಳುವಾಗ ವಾಕ್ಯದ ಕೇವಲ ಭೌತಿಕ ಅಸ್ತಿತ್ವ ಮಾತ್ರ ಮುಖ್ಯವಲ್ಲ. ಈ ವಾಕ್ಯಗಳನ್ನು ನಾವು ಅರ್ಥಮಾಡಿಕೊಳ್ಳುವ ನೆಲೆಗಳು ನಮ್ಮ ಗ್ರಹಿಕೆಗೆ ಅನುಸಾರವಾಗಿ ವಿಭಿನ್ನವಾಗುತ್ತಾಹೋಗುತ್ತವೆ ಮತ್ತು ನಿಘಂಟು ಸೂಚಿಸುವ ಅರ್ಥದಾಚೆಗೆ ದಾಟುತ್ತದೆ. ಭಾಷೆಯೇ ಈ ದೃಷ್ಟಿಶುದ್ಧ ಭೌತಿಕವಾಗಿ ರೂಪವಾಗುವುದು ಅಸಾಧ್ಯ.

'ಅಮೂರ್ತವಾದ ಪರಿಕಲ್ಪನೆಗಳನ್ನು ಮೂರ್ತರೂಪಕ್ಕಿಳಿಸುವುದೆ, ಭಾಷೆ ' ( ಸಸೂರ್.) ಎಂಬಂಥ ಹೇಳಿಕೆಗಳು ಭಾಷೆಯನ್ನು ಮೂರ್ತ ಮತ್ತು ಅಮೂರ್ತವೆಂದು ವರ್ಗೀಕರಿಸುವುದೇ ಅಲ್ಲದೆ, ಪ್ರಜ್ಞೆಮತ್ತು ಸುಪ್ತ ಪ್ರಜ್ಞೆಗಳನಡುವೆ ದ್ವಂದ್ವಾತ್ಮಕ ನಿಲುವನ್ನು ವ್ಯಕ್ತಪಡಿಸುತ್ತದೆ. ಅಮೂರ್ತವಾದ ಆಲೋಚನೆಗಳನ್ನು ಇನ್ನೊಬ್ಬರಿಗೆ ವ್ಯಕ್ತಪಡಿಸಲು ನಾವು ಭಾಷೆಯ ಸಹಾಯವನ್ನು ಪಡೆಯುತ್ತೇವೆ ಎಂದು ಹೇಳಿದರೆ ಭಾಷೆಯು ಅಮೂರ್ತವನ್ನು ಒಳಗೊಂಡಿತು ಎಂದ ಹಾಗಾಗುತ್ತದೆ. ಆದರೆ ಬೇರ್ಪಡಿಸಿ ನೋಡಿದರೆ ಅದರ ಆಲೋಚನೆಗಳೆಲ್ಲವೂ ಭಾಷೆಯ ಚಹರೆಯನ್ನು ಒಳಗೊಂಡಿರುವುದಿಲ್ಲ . ನಮ್ಮ ಅಲೋಚನೆಯ ಕೆಲವಂಶಗಳು ಭಾಷೆಗೆ ಇಳಿದು , ಮತ್ತೆ ಹಾಗೆಯೇ ಉಳಿಯುತ್ತವೆ. ಹೀಗಾಗಿಯೇ ಒಂದು ನಿಯಮದೊಳಗಿನ ಭಾಷೆ ಮತ್ತು ಹೊರಗಿನ ಆಲೋಚನೆಗೂ ಯಾವ ರೀತಿಯ ತಾದ್ಯಾತ್ಮವಿದೆಯೆಂದು ನಾವು ಹೇಳಲು ಸಾಧ್ಯ? ನಾವು ಭಾಷೆಯನ್ನು ಬೇರೆ ಬೇರೆ ರೀತಿಯ ಸುಸಂಬದ್ಧತೆಗೆ ಗುರಿಪಡಿಸುತ್ತಿದ್ದೇವೆ ಎಂಬುದರಿಂದಲೇ ಭಾಷಿಕ ರಚನೆಗೆ ನಿರ್ದಿಷ್ಟತೆಯಿದೆಯೆಂದು ಹೇಳಲು ಬರುವುದಿಲ್ಲ. ನಿಜವಾದ ವಸ್ತು ಮತ್ತು ಭಾಷಿಕ ವಸ್ತು ವಿನ ನಡುವಣ ಭಿನ್ನತೆಯನ್ನು ಒಂದು ಏಕತ್ರೀಕರಣದ ಚೌಕಟ್ಟಿನೊಳಗೆ ತರುವಂತಿಲ್ಲ. ಹೊರಗಣ ವಸ್ತು; ಯೋಚಿಸುವವನು; ಅದಕ್ಕೆ ಆರೋಪಿಸುವ ನೆಲೆಗಳು; ಅದು ಭಾಷೆಯಲ್ಲಿ ಪರಿವರ್ತನೆಗೆ ಗುರಿಯಾಗುವ ವಿಧಾನ; ಅಲ್ಲಿ ಉಂಟಾಗುವ ಅಡೆತಡೆಗಳು ಇವೆಲ್ಲವನ್ನು ಅತ್ಯಂತ ಸೂಕ್ಷ್ಮವಾಗಿ ಪರ್ಯಾವಲೋಚಿಸಬೇಕು ಈ

ರೀತಿಯ ಸಂಗತಿಗಳೆಲ್ಲಾ ಕೇವಲ ಸರಳ ದ್ವಂದ್ವದಲ್ಲಿ ರೂಪುಗೊಳ್ಳುವ ಪ್ರಕ್ರಿಯೆಗಳಲ್ಲ, ಒಟ್ಟಿನಲ್ಲಿ ಭಾಷೆಯೆನ್ನುವುದು ವಸ್ತುವನ್ನಾಗಲೀ: ಆಲೋಚನೆಯನ್ನಾಗಲೀ ಒಂದೆಡೆಗೆ ಎಳೆತಂದು ಕೂರಿಸಿಡುವ ಕೊಠಡಿಯಲ್ಲ.

ಭಾಷೆಯು ಲೇಖಕನ ಆಲೋಚನೆಯನ್ನು ಮೀರಿ ನಡೆಯುವುದಕ್ಕೆ ಕಾರಣವೆಂದರೆ ಅದು ಸೃಷ್ಟಿಸುವ ಸಂವಹನದ ಸಾಧ್ಯತೆ. ರಾಚನಿಕವಾಗಿ ಬಂಧಿತವಾಗಿದ್ದರೆ ಅಲ್ಲಿ ಹೊಸ ಸಂವಹನದ ಯಾವ ಸಾಧ್ಯತೆಗಳೂ ಕೂಡಾ ಸಾಧ್ಯವಾಗುತ್ತಿರಲಿಲ್ಲ.

ಭಾಷೆಯ ಚರಿತ್ರೆಯ ಕುರಿತು ನಮ್ಮಲ್ಲಿ ಚರ್ಚೆಯು ನಡೆಯುವಾಗ ಅದಕ್ಕೆ ಒಂದು 'ಕಲ್ಪಿತ' ವಾದ ನೆಲೆಯನ್ನು ತಂದುಕೊಡುತ್ತೇವೆ. ಹೀಗೆ ಕಲ್ಪಿತವಾದ ನೆಲೆಯನ್ನು ನಾವು ತಂದುಕೊಡುವಾಗ ಆಲೋಚನೆಯು ಬೇರೆ ಮತ್ತು ಅಭಿವ್ಯಕ್ತಗೊಂಡ ಭಾಷೆಯು ಬೇರೆ ಎಂದು ಹೇಳಬೇಕಾಗುತ್ತದೆ.

ಭಾಷೆಯ ಚರಿತ್ರೆಯನ್ನು ಕಟ್ಟುವಾಗ ನಾವು ಅವಲಂಬಿಸಿಕೊಳ್ಳುವುದು ಅಭಿವ್ಯಕ್ತಗೊಂಡ ಭಾಷೆಯ ಕ್ರಮವನ್ನು ಮಾತ್ರ. ಉದಾಹರಣೆಗೆ 'ದ್ರಾವಿಡ ಭಾಷಾವರ್ಗ' ಎಂದು ಗುರುತಿಸುವಾಗ, ಮತ್ತು ದ್ರಾವಿಡ ಭಾಷೆಯ ಚರಿತ್ರೆಯೆಂದು ನಾವು ಹೇಳುವಾಗ 'ವ್ಯಕ್ತ'ಗೊಂಡ ಕ್ರಮಗಳು ನಮಗೆ ಮುಖ್ಯವಾಗುತ್ತವೆ. ಅದರಾಚೆಗೆ ಇರುವ 'ವ್ಯತ್ಯಾಸ' ( ಅಂದರೆ : ವ್ಯಕ್ತಗೊಂಡ ಭಾಷಿಕ ಕ್ರಮಕ್ಕೂ ವ್ಯಕ್ತಗೊಳ್ಳದೇ ಇರುವ ವ್ಯತ್ಯಾಸ) ನಮಗೆ ತಿಳಿಯದೇ ಹೋಗಬಹುದು ಹೀಗಾಗಿ ಭಾಷೆಯ ಚರಿತ್ರೆಯೆಂದು ನಾವು ಹೇಳುವಾಗ ನಮಗೆ ತಿಳಿಯದೇ ಇರುವ ಅನೇಕ ಸಂಗತಿಗಳು ಹಾಗೆಯೇ ಉಳಿದಿರಬಹುದು.

ಭಾಷೆಯ ಚರ್ಚೆಯಲ್ಲಿ ಬರುವ ಮತ್ತೊಂದು ಪ್ರಮುಖ ಸಮಸ್ಯೆಯೆಂದರೆ ಯಾವಾಗಲೂ ಮಾಡುವ ವರ್ಗೀಕರಣಗಳು. ಭಾಷೆಯ ವರ್ಗೀಕರಣ ಮತ್ತು ಆಲೋಚನೆಗಳಲ್ಲೆ ಇರುವ ವರ್ಗೀಕರಣಗಳು ಪರಸ್ಪರ ಭಿನ್ನವೆಂದು ಹೇಳುತ್ತಾ ಬಂದಿದ್ದೇವೆ. ತತ್ತ್ವಜ್ಞಾನ: ವಿಜ್ಞಾನ: ಅರ್ಥಶಾಸ್ತ್ರ ಈ ರೀತಿಯ ಶಿಸ್ತುಗಳು ಪರಿಕಲ್ಪನೆಗಳನ್ನು ಮಂಡಿಸದೆ ತಮ್ಮ ವಾಗ್ವಾದಗಳನ್ನು ರೂಪಿಸುವಂತಿಲ್ಲ. ಈ ರೀತಿಯ ಶಿಸ್ತುಗಳು ಪರಿಕಲ್ಪನೆಗಳನ್ನು ಚಾಲ್ತಿಗೆ ತರುವಾಗ ಆಲೋಚನೆ ಮತ್ತು ಭಾಷೆಯ ಮಂಡನೆಯಲ್ಲಿ ಪರಸ್ಪರ ವ್ಯತ್ಯಾಸಗಳು ಉಂಟಾಗುತ್ತವೆ ಎಂದು ಹೇಳುತ್ತೇವೆ. ಉದಾಹರಣೆಗೆ - ಭಾರತೀಯ ತತ್ತ್ವಜ್ಞಾನಗಳಲ್ಲಿ ಬಳಕೆಯಾಗಿರುವ ಒಂದು ಪರಿಕಲ್ಪನೆಯನ್ನು ನೋಡಿ 'ದ್ವೈತ ಸಿದ್ಧಾಂತ' ಎಂಬ ಈ ಪರಿಭಾಷೆಯಲ್ಲಿ ಇರುವ ಸ್ಥೂಲವಾದ ಚೌಕಟ್ಟೆಂದರೆ 'ದೇವರು ಬೇರೆ ಭಕ್ತಬೇರೆ. ಆತ್ಮಬೇರೆ ಪರಮಾತ್ಮಬೇರೆ'. ಇದರಲ್ಲಿ ಎರಡು ಸಂಗತಿ ಮುಖ್ಯವಾಗುತ್ತವೆ. 'ಪರಮಾತ್ಮ - ಆತ್ಮ' ಎರಡೂ ನಮ್ಮ ಮೂರ್ತವಾದ ವಾಸ್ತವದ ಸಂಗತಿಗಳಲ್ಲ. ಇದನ್ನು ಭಾಷಿಕ ಕ್ರಮಕ್ಕೆ ಇಳಿಸಬೇಕೆಂದರೆ - ಇವುಗಳನ್ನು ಒಂದು ರೀತಿಯ ಪರಿಕಲ್ಪನಾತ್ಮಕ ಅಭ್ಯಾಸಗಳಿಗೆ ಇಳಿಸಬೇಕಾಗುತ್ತದೆ. ಅಂದರೆ ಆಲೋಚನೆಯನ್ನು ಭಾಷೆಯ ಪರಿಕಲ್ಪನೆಯೊಳಗೆ ಇಳಿಸುವಾಗ ಸರಳದ್ವಂದ್ವಗಳೇ ಇರುತ್ತವೆಯೆಂದರ್ಥವಲ್ಲ.

ಭಾಷೆಯು ಈ ದೃಷ್ಟಿಯಿಂದ ಯಥಾವತ್ತಾದ ಆಲೋಚನೆಯ ದಾಖಲೆಯಲ್ಲ ಎಂದು ಹೇಳಿದ ಕೂಡಲೇ ನಾವು ತರುವ ದ್ವಂದ್ವಗಳ ಪರಿಕಲ್ಪನೆಯು ಅಷ್ಟೊಂದು ಸಮಂಜಸವಲ್ಲ. ಭಾಷೆಯಲ್ಲಿ ವ್ಯಕ್ತವಾಗುವ ಸಂಗತಿಗಳು ಎಂದ ಕೂಡಲೇ ಅಲ್ಲಿ ಆಯಾ ಪರಿಕಲ್ಪನೆಗಳು 'ಆಗುವಿಕೆ' ಎಂಬ ಕ್ರಿಯಾತ್ಮಕ ರೂಪವನ್ನು ಒಳಗೊಂಡಿರುತ್ತವೆಯೆಂದು ತಿಳಿಯಬೇಕೇ ಹೊರತು ಮತ್ತೇನೂ ಅಲ್ಲ. ಭಾಷೆಯ ಹೊರಗಡೆಯ ಆಲೋಚಯೂ ಉಳಿದಿರುತ್ತದೆ ಮತ್ತು ಅದು ಹೊರಗಡೆ ಭಾಷೆಯು ಉಳಿದಿರುತ್ತದೆ.

ಹೀಗಾಗಿ ನಾವು ವರ್ಗೀಕರಿಸಿಕೊಳ್ಳುವ ಭಾಷೆಯ ಪರಿಕಲ್ಪನೆಗಳು ಅನೇಕ ಸಂದರ್ಭದಲ್ಲಿ ತಮ್ಮ ಗರ್ಭದಲ್ಲಿಯೇ ಸಮಸ್ಯೆಯನ್ನು ಉಳಿಸಿಕೊಂಡಿರುತ್ತವೆ. ಆಲೋಚನೆಯು ಹೇಗೆ ನಿಯಮ ಬದ್ಧವಲ್ಲವೋ ಅದೇ ರೀತಿಯಲ್ಲಿ. ಭಾಷೆಯೂ ಕೂಡಾ ನಿಯಮಬದ್ಧವಲ್ಲ. ಅದನ್ನು ಹಾಗೆ ಹೇಳುತ್ತಾ ಬಂದಿದ್ದೇವೆ, ಅಷ್ಟೆ.

ಗುಣಮಟ್ಟ, ಅಳತೆ, ಸ್ಥಳ, ಕಾಲ, ಮುಂತಾದವುಗಳಿಗೆ ವಿಜ್ಞಾನವು ಒಡ್ಡಿರುವ ಅರ್ಥಗಳನ್ನು ನೋಡಿ: ಇವು ಇರುವ ಸತ್ಯಗಳನ್ನು ಭಾಷೆಯ ಪರಿಕಲ್ಪನೆಯಲ್ಲಿ ಹೇಳುವ ಪ್ರಯತ್ನಗಳನ್ನು ಮಾಡುತ್ತವೆ. ಈಗಾಗಲೇ ಅಸ್ತಿತ್ವದಲ್ಲಿ ಇರುವ ಸಂಗತಿಗಳ ಬಗ್ಗೆ, ಮತ್ತು ಭಾಷಿಕ ಉಪಕ್ರಮದಲ್ಲಿ ಹೇಳುತ್ತೇವೆ. ಉದಾಹರಣೆಗೆ: ನಾವು ಆಕರ್ಷಕವಾಗಿ ಹೇಳುವ 'ಅನಂತ ಅವಕಾಶ'ದ ಪರಿಕಲ್ಪನೆಯನ್ನು ನೋಡಿ: ವಚನವೊಂದರ ಸಾಲು ಹೀಗಿದೆ.

'ಹಿಂದಣ ಅನಂತ ಮುಂದಣ ಅನಂತ'

ಆದರೆ, ವಿಜ್ಞಾನದ 'ಅನಂತ ಅವಕಾಶದ ' ಪರಿಕಲ್ಪನೆಯು ಬೇರೊಂದನ್ನು ಸೂಚಿಸುತ್ತದೆ, ಭೂಮಿಯ 'ಅವಕಾಶ'ವು ಮತ್ತೊಂದನ್ನು ಪ್ರತಿನಿಧಿಸುತ್ತದೆ. ನಾವು ಭಾಷೆಯನ್ನು ಕೃತಕವಾಗಿ ರಚಿಸಿಕೊಂಡಿರುವುದರಿಂದಲೇ ಈ ಸಮಸ್ಯೆಯಿರುವುದು.

'ಆಯಾಯ ಶಿಸ್ತುಗಳ ಭಾಷೆ' ಗಳೆಂದು ನಾವು ಪ್ರತ್ಯೇಕಿಸುತ್ತೇವೆ ತಾನೆ? ವಿಜ್ಞಾನದ ಭಾಷೆ: ಅರ್ಥಶಾಸ್ತ್ರದ ಭಾಷೆ , ತತ್ವ ಜ್ಞಾನದ ಭಾಷೆ ಇತ್ಯಾದಿ. ಈ ರೀತಿಯ ಪರಿಕಲ್ಪನೆಗಳಲ್ಲಿ ವಿಜ್ಞಾನದ ಭಾಷೆಗೂ, ಸಾಮಾನ್ಯವಾದ ಭಾಷೆಗೂ ವ್ಯತ್ಯಾಸವಿದೆ. ಈ ರೀತಿಯ ವ್ಯತ್ಯಾಸಗಳನ್ನು ನಾವು ಕೃತಕವಾಗಿ ಮಾಡಿಕೊಂಡಿರುವುದು. ಅದರಷ್ಟಕ್ಕೆ ಅವು ಸ್ವಾಯತ್ತವೇನೂ ಅಲ್ಲ.

ಯಾವುದೇ ಅಮೂರ್ತವಾದ ಚಿಂತನೆಗಳು ಭಾಷೆಯ ಅಸ್ತಿತ್ವಕ್ಕೆ ಬಂದಾಗ ಅಲ್ಲೊಂದು 'ಇರುವಿಕೆ' ಯು ಸಾಧ್ಯವಾಗುತ್ತದೆ. ಅದು ವಸ್ತುವಿನ ಅಥವಾ ವಿಷಯದ ನೇರ ಪ್ರತಿಬಿಂಬವಲ್ಲ. ಆದರೂ ಭಾಷೆಯ ಅಸ್ತಿತ್ವದೊಳಗೆ ಯಾವುದೇ ಸಂಗತಿಯು ರೂಪೀಕರಣಕ್ಕೆ ಒಳಗಾದ ಸಂದರ್ಭದಲ್ಲಿ ಅದು ಸಾಮಾನ್ಯೀಕೃತ ಚಹರೆಯನ್ನು ಒಳಗೊಂಡು ಬಿಡುತ್ತದೆ. ನಮಗೆಷ್ಟು ಅಗತ್ಯ ಮತ್ತು ಉದ್ದೇಶಗಳಿವೆಯೋ ಅವುಗಳನ್ನು ಭಾಷೆಯ ರೂಪಕ್ಕೆ, ಸಂವಹನಕ್ಕೆ ಬಳಸಿಕೊಂಡಿದ್ದೇವೆ.

ಆಲೋಚನೆ-ಭಾಷೆ ಮತ್ತು ಅರ್ಥಗಳ ನಡುವಣ ಸಂಬಂಧವೂ ಸಂವಾದಿಯಾಗಿರುತ್ತದೆಯೇ ಹೊರತು ತುಂಬಾ ನಿರ್ದಿಷ್ಟವಾಗಿರುವುದಿಲ್ಲ. ಒಂದು ನಿರ್ದಿಷ್ಟ ಭಾಷೆಯೊಳಗೆ ನಮ್ಮ ಮನಸ್ಸಿನ ಚಟುವಟಿಕೆಗಳಲ್ಲಿ, ಭಾಷೆಯ ರೂಪ: ಭಾಷಿಕ ವಸ್ತು ಎಂದು ಈ ಸಂದರ್ಭದಲ್ಲಿ ಕರೆಯುವಂತಿಲ್ಲ.

ಯಾವುದೇ ಭಾಷಿಕ ರೂಪವು ' ಆಗುವಿಕೆ' ಆದಾಗ , ಅದರ ಮೂಲಕಾರಣ ಯಾವುದು ಎಂದು ವ್ಯಾಖ್ಯಾನಿಸುವುದು ಕಷ್ಟ. ಉದಾಹರಣೆಗೆ ಮನೆ ಮಣೆ ಇತ್ಯಾದಿ ಪದಗಳಿಗೆ ಮೂಲಕಾರಣ ಯಾವುದು? ಅದರ ತಾತ್ತ್ವಿಕ ಹಿನ್ನೆಲೆ ಯಾವುದು? ಎಂದು ಹೇಳುವುದು ಹೇಗೆ ? ಈ ಪದಗಳು ನಮ್ಮ ಬಳಕೆಯಲ್ಲಿವೆ. ಹೆಚ್ಚೆಂದರೆ ಈ ಪದಗಳ ಅಕ್ಷರಗಳು, ಅವುಗಳ ಭಾಷಿಕ ಅಭಿವ್ಯಕ್ತಿಯ ಕುರಿತು ಹೇಳಬಹುದು. ಸ್ವರ-ವ್ಯಂಜನಗಳು ಹೇಗೆ ಬಳಕೆಯಾಗಿದೆ ಎಂದು ವಿವರಿಸುವುದು ಸಾಧ್ಯ. ಆದರೆ ಯಾಕೆ ಹೀಗಾಗಿದೆ ಎಂದು ಖಚಿತವಾಗಿ ಹೇಳಲು ಅಸಾಧ್ಯ, ಅಷ್ಟರಮಟ್ಟಿಗೆ ಭಾಷೆಯು ನಮ್ಮೆದುರು ಹಾಜರಾಗುವ ಸಂದರ್ಭದಲ್ಲಿ 'ಹೊರಗಿನ ' ಸತ್ಯವನ್ನು ಬಿಟ್ಟುಬಿಡುತ್ತದೆ.

ಭಾಷೆಯು ಅಸ್ತಿತ್ವಕ್ಕೆ ಬಂದಾಗ ಯಾವುದೇ ವಸ್ತುವನ್ನಾಗಲೀ, ವಿಷಯವನ್ನೇ ಆಗಲಿ ಬಹಳ ಖಚಿತವಾಗಿ ಹೇಳುತ್ತದೆಯೆಂದು ಪರಿಭಾವಿಸುವಂತಿಲ್ಲ ಭಾಷೆಯ ಕೆಲವು ಕನಿಷ್ಟಘಟಕಗಳನ್ನು ನೋಡಿ: ಇವು ಯಾವುದೇ ವಸ್ತುವಿನ ನಿಜವಾದ ನಿರ್ದೇಶನವನ್ನು ಮಾಡುತ್ತವೆ ಅನೇಕ ಸಂದರ್ಭದಲ್ಲಿ ನಾವು ಬಳಸುವ ಕೆಲವು ಪದಗಳಿಗೂ ಕೂಡಾ ನಿಜವಾದ ರೂಪವನ್ನು ಪ್ರತಿನಿಧಿಸುವ ಶಕ್ತಿಯಿರುವುದಿಲ್ಲ. ಹೀಗಿರುವಾಗ ಭಾಷೆಗೆ ತುಂಬಾ ಖಚಿತತೆಯಿರುತ್ತದೆ, ಸೂಚಕ, ಸೂಚನೆ ಮತ್ತು ಸೂಚಿತದ ನಡುವೆ ಸರಳವಾದ ಸಂಬಂಧವು ಇರುತ್ತದೆಯೆಂದು ಹೇಳುವುದಾದರೂ ಹೇಗೆ ?

ಉದಾಹರಣೆಗೆ: ಅವನು

ಅವಳು

ಹಾಗೆಯೇ: ರಮ

ಮರ.

ಮೇಲಿನ ಎರಡೆರಡು ಪದಗಳ ಜೋಡಿಯನ್ನುನೋಡಿ.'ಅವನು' ಎಂಬ ಪದದ ಕೊನೆಯ ಅಕ್ಷರದ ಗೈರು ಹಾಜರಿಯಾಗಿ 'ಅವಳು' ಎಂದಾಗಿದೆ. ಅದೇ ರೀತಿಯಲ್ಲಿ ಎರಡನೆಯ ಪದಗುಚ್ಛಗಳಲ್ಲಿ ರಮ, ಮರ ಎಂಬಲ್ಲಿ ಪದಗಳು ಅದಲು ಬದಲಾಗುವ ಮುಖಾಂತರವೇ ಅರ್ಥಗಳು ಬದಲಾದವು. ಮೊದಲನೆಯ ಜೋಡಿ ಪದಗಳಲ್ಲಿ 'ನು'ಗೈರು ಹಾಜರಿಯಾಯಿತು 'ಳು' ಹಾಜರಾಯಿತು, 'ನು'ವಿಗಿಂತ 'ಳು'ಭಿನ್ನವಾಗಿದೆ. ನಿರಚನದ ಪ್ರಕಾರ. ಪದದಲ್ಲಿ ಒಂದು ಧ್ವನಿಮಾದ ಬದಲಾವಣೆಯು ಆದಾಗಲೂ ಅರ್ಥಗಳು ಬದಲಾಗುತ್ತದೆ. ಆದರೆ ಅದು ನೇರವಾಗಿ ಸೂಚಕ ಸೂಚಿತದ ನಡುವಣ ಸಂಬಂಧವನ್ನಾಗಲೀ , ವಸ್ತುವಿನ ಯಥಾವತ್ತಾಥ ಸಂಬಂಧವನ್ನಾಗಲೀ ಇಟ್ಟುಕೊಂಡಿರುವುದಿಲ್ಲ.

ಇದೇ ಧ್ವನಿನಿಯಮಗಳು ಅಥವಾ ಅಕ್ಷರಗಳು ನಮ್ಮ ಬಳಕೆಯ ಪದದಲ್ಲಿ ಬೇರೆ ಬೇರೆ ರೀತಿಯಲ್ಲಿ ಎಷ್ಟೊಂದು ಸಾರಿ ಹಾಜರಾಗುವುದಿಲ್ಲ. ಅವಳು, ಅವುಗಳು, ದನಗಳು, ಅಳು ಇತ್ಯಾದಿ . ಒಂದು ಕಡೆಯಿಂದ ಮತ್ತೊಂದು ಕಡೆಗೆ ಈ ಅಕ್ಷರಗಳು ಪಲ್ಲಟವಾಗುವ ಮುಖಾಂತರವೇ ಭಾಷೆಯು ತನ್ನ ಇರುವಿಕೆಯನ್ನು ಬೇರೊಂದು ರೀತಿಯಲ್ಲಿ ಅಭಿವ್ಯಕ್ತಿಸುತ್ತದೆ ಎಂಬುದನ್ನು ಗಮನಿಸಿ. ಈ ತರಹ ಬದಲಾವಣೆಯಾಗುವುದನ್ನು ನಾವು ಕೇವಲ ಭಾಷೆಯ ವ್ಯವಹಾರವೆಂದಾಗಲೀ , ಇದೆಲ್ಲಾ ಭಾಷಾ ವಿಜ್ಞಾನಿಗಳ ತಲೆ ಬಿಸಿಯೆಂದಾಗಲೀ ಕರೆಯಬೇಕಾಗಿಲ್ಲ. ಹಾಗೆ ನೋಡಿದರೆ ಭಾಷಾವಿಜ್ಞಾನಿಗಳು ಈ ಪಲ್ಲಟಗಳ ಕುರಿತು ಹೇಳುವಾಗ ಭಾಷೆಯ ಇರುವಿಕೆಯ ಕುರಿತೇ ಹೇಳುತ್ತಾ ಹೋಗುತ್ತಾರೆ.

'ಚಂದಿರನೇತಕೆ ಓಡುವ ನಮ್ಮ' ಎಂಬ ಕವಿತೆಯ ಸಾಲನ್ನುನೋಡಿ, ಈ ಸಾಲಿನಲ್ಲಿ.'ಚಂದಿರ' ಎನ್ನುವುದು ಬಂದಿರುವುದು ಹೊರಗಿನ ನಾವು ನೋಡುವ ಚಂದ್ರನ ಬದಲಾಗಿ ಬಂದಿರುವುದು ಮಾತ್ರವೇ ಅಲ್ಲ, ಮೂಲ ಚಂದ್ರನನ್ನು ಇದು ಭಿನ್ನವಾಗಿ ಗ್ರಹಿಸುತ್ತದೆ. ಭಾಷೆಯ ಚರಿತ್ರೆಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ನಾವು ಈ ರೀತಿಯ ಪದಗಳಿಗೆ ಇರುವ ಪ್ರತಿಮಾತ್ಮಕ ನೆಲೆಯನ್ನು ಶೋಧಿಸುವುದಿಲ್ಲ. ಈ ತರಹ ಅನೇಕ ಪದಗಳನ್ನು ನಾವು ಸಾಹಿತ್ಯದಲ್ಲಿ ಪ್ರತಿಮಾತ್ಮಕ ರೂಪವಾಗಿ ಬಳಸುತ್ತೇವೆ. ಮೂಡುವನು ರವಿ ಮೂಡುವನು; ಮೂಡಣ ಮನೆಯ ಮುತ್ತಿನ ನೀರಿನ ಎರಕವಾ ಹೊಯ್ದ 'ಅಗೆದಾಗ ನಕ್ಕದ್ದು ನುಣಪು ಕುಂಕುಮ ಭೂಮಿ; ಇತ್ಯಾದಿ, ಈ ರೀತಿಯ ಸಾಲುಗಳು ಭಾಷೆಯ ಚರಿತ್ರೆಯಾಗಲೀ: ಭಾಷೆಯ ನಿರ್ದಿಷ್ಟ ರಾಚನಿಕ ವಿಧಾನವಾಗಲೀ , ಹೊರಗಿನ ವಸ್ತುವಿನ ಪ್ರಾತಿನಿಧಿಕರೂಪವೆಂಬ ಕಲ್ಪನೆಯಾಗಲೀ ನಮಗೆ ಮುಖ್ಯವಲ್ಲ. (ತೌಲನಿಕವಾಗಿ ಹೇಳಬಹುದಾದರೆ,

ಧ್ವನಿ ತತ್ತ್ವದಲ್ಲಿ ಬರುವ - ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥ ಪರಿಕಲ್ಪನೆಗಳು).

ಪ್ರತಿಯೊಂದು ಸಾಹಿತ್ಯಕ ಪಠ್ಯಗಳು ಕೂಡಾ ಹೀಗೆ ಭಾಷೆಯ ಬಳಕೆಯಲ್ಲಿ ಪ್ರತಿಮಾತ್ಮಕ ಸಂಯೋಜನೆಯನ್ನು ಮಾಡುವ ಮುಖಾಂತರವೇ ತನ್ನ ಭಿನ್ನತೆಯನ್ನು ಕಾಪಾಡಿಕೊಳ್ಳುತ್ತವೆ. ಮೇಲೆ ಉಲ್ಲೇಖಿಸಿರುವ ಕವಿತೆಯ ಸಾಲುಗಳಲ್ಲಿ ಕವಿಗಳ ಆಲೋಚನೆ ಮತ್ತು ಕವಿತೆಯ ಸಾಲುಗಳಲ್ಲಿ ಅಸ್ತಿತ್ವಕ್ಕೆ ಬಂದ ಪ್ರತಿಕ್ರಿಯೆಗಳಿಗೆ ಸಮತಲದ ಬಿಂಬ ಇದೆಯೆಂದು ಹೇಳಲು ಸಾಧ್ಯವೆ? ಆದರೆ ಈ ಕವಿತೆಗಳಲ್ಲಿ ಬಳಕೆಯಾಗಿರುವ 'ಪ್ರತಿಮೆ'ಗಳು ( ರೂಪಕ) ಭಾಷಿಕ ವ್ಯಾಪಾರದ 'ಮುಕ್ತತೆ'ಯನ್ನು ಸೂಚಿಸುತ್ತವೆ. ತನ್ನ ' ಇರುವಿಕೆ' ಯನ್ನು 'ಮೂಲದ ಇರುವಿಕೆ' ಭಿನ್ನಗೊಳಿಸುತ್ತದೆಯಷ್ಟೆ? (ನವ್ಯ ವಿಮರ್ಶಕರು ಈ ಪ್ರತಿಮೆಗಳ ಅರ್ಥವನ್ನು ಪಠ್ಯದೊಳಗಡೆಗೆ ಮುಕ್ತಾಯಗೊಳಿಸುತ್ತಾರೆ).

ಭಾಷೆಯ ಚೌಕಟ್ಟಿನೊಳಗೆ ಹಾಜರಾದ ಸಂಗತಿಗಳನ್ನು ಮಾತ್ರ ಚರ್ಚಿಸುವುದರಿಂದ ಭಾಷೆಯನ್ನು ಒಂದು ಸೀಮಿತವಾದ ಚೌಕಟ್ಟಿನೊಳಗೆ ಇರಿಸಿದಂತೆ ಆಗುತ್ತದೆ. ಭಾಷೆಯ ಅಸ್ತಿತ್ವವೆಂದರೆ ಕೇವಲ ಬರವಣಿಗೆ ಮತ್ತು ಮಾತು ಎಂಬ ಪ್ರಕ್ರಿಯೆಯಲ್ಲಿ ಅಸ್ತಿತ್ವದಾಚೆಗೆ ಇರುವ ಅಲೌಕಿಕವನ್ನು ನಾವು ಗುರುತಿಸದೇ ಹೋದರೆ ಅದು ಕೇವಲ ನಿಘಂಟು ಸೂಚಿಸುವ ಅರ್ಥವನ್ನು ನಾವು ಪರಿಭಾವಿಸಿದಂತೆ.

'ಹುಲಿ'ಯೆಂದು ನಾವು ಒಂದು ಪ್ರಾಣಿಯನ್ನು ಗುರುತಿಸುತ್ತೇವೆ. ಅದನ್ನು ಉಚ್ಚರಿಸುತ್ತೇವೆ ಮತ್ತು ಅದನ್ನು ಬರೆಯುತ್ತೇವೆ. ಈ ಮೂರು ರೀತಿಯ ಚಲನ ಶೀಲತೆಯನ್ನು ಗಮನಿಸಿ. ಒಂದು 'ನಿಜ'ವಾದ ಹುಲಿ. ಅದನ್ನು ಗುರುತಿಸುವುದು. ಅವನ್ನು ಹೆಸರಿಸುವುದು: ಬರೆಯುವುದು ಈ ರೀತಿಯ ಚಲನಶೀಲತೆಯಲ್ಲಿ ಎಷ್ಟೊಂದು ವ್ಯತ್ಯಾಸಗಳಿವೆ. ಹುಲಿಯನ್ನು 'ಹುಲಿ'ಯೆಂದು ಹೆಸರಿಸುವುದಕ್ಕೆ ಕಾರಣವೇನು? ಅಥವಾ ಈ ಪ್ರಶ್ನೆಯನ್ನು ಹೀಗೆ ಇಡಬಹುದು. ಹುಲಿ ಯಾಕೆ ಬೆಕ್ಕು ಆಗುವುದಿಲ್ಲ? ಒಂದು ಪದ: ಒಂದು ವಸ್ತು ಒಂದು ವಿಷಯ ಹೀಗೆ ಭಿನ್ನತೆಗಳನ್ನು ಕಾಪಾಡಿಕೊಳ್ಳುವುದೆಂದರೆ 'ಗುರುತಿಸುವಿಕೆ' 'ಭಾಷೆಯ ಇರುವಿಕೆ'ಯಲ್ಲಿಯೇ ವ್ಯತ್ಯಾಸಗಳನ್ನು ಕಂಡುಕೊಳ್ಳುವುದು ಎಂದರ್ಥ, ಈಗ ಇದರಲ್ಲಿ ಯಾವುದು ಪ್ರಧಾನ,ಯಾವುದು ಅಪ್ರಧಾನವೆಂದು ಹೇಳುವುದು ಹೇಗೆ ? ಎಲ್ಲಾ ವಸ್ತುಗಳು, ವಿಷಯಗಳು ಅದರ ಪಾಡಿಗೆ ಅವುಗಳಿದ್ದವು. ನಾವು ಅವುಗಳಿಗೆ ಹೆಸರುಗಳನ್ನು ಕೊಟ್ಟಿದ್ದೇವೆ. ಅಂದರೆ ಹೇರುವುದೆಂದರೆ ನಾವದನ್ನು ಪರಿಕಲ್ಪನಾತ್ಮಕ ವ್ಯಾಪ್ತಿಯೊಳಗಡೆಗೆ ತರುವುದು ಎಂದರ್ಥ. ಇಂತಹ 'ಗುರುತಿಸುವಿಕೆ' ಯೇ ಒಂದು ರೀತಿಯಿಂದ ಸಮಸ್ಯಾತ್ಮಕವಾದುದು. ಈ ತರಹ ಗುರುತಿಸಿ ಕೊಳ್ಳುವ ಪ್ರಕ್ರಿಯೆಯಿಂದಾಗಿ ಬೇರೆಯದನ್ನು ಕಲ್ಪಿಸಿಕೊಳ್ಳಲಾರೆವು ಅಷ್ಟೆ.

'ಹೀಗಿದ್ದರೂ 'ಆದರೆ' ಮತ್ತು' ಆಗುತ್ತದೆ'ಈ ತರಹದ ಮಾತುಗಳಿಗೆ ನಿಘಂಟಿನಲ್ಲಿ ಇರುವ ಅರ್ಥಕ್ಕಿಂತ ಬೇರೆಯಾದ ರೀತಿಯಲ್ಲಿ ಬಳಸುತ್ತೇವೆ. ಅನೇಕ ಸಂದರ್ಭದಲ್ಲಿ ವ್ಯಾಕರಣದ ನಿಯಮಗಳನ್ನು ದಾಟಕೊಂಡು ಕೆಲವು ಪದಗಳು ಬಳಕೆಯಾಗುತ್ತವೆ ಎಂದಾದರೆ ಅಲ್ಲಿ ಅದರ ಅಭಿವ್ಯಕ್ತಿಯನ್ನು ದಾಟಕೊಂಡು ಕೂಡಾ ಕೆಲವು ಸಂಗತಿಗಳಿವೆಯೆಂದರ್ಥ.

ಹೀಗಾಗಿ ಭಾಷೆಯ ಚರ್ಚೆಯೆಂದರೆ. ಅದು ಕೇವಲ ಶಾಸ್ತ್ರದ ಪ್ರಶ್ನೆಯಲ್ಲ.

## ಅಧ್ಯಾಯ-11

# ಗ್ರಂಥದಿಂದ ಮೂಲ ಪಠ್ಯಕ್ಕೆ

ನಮ್ಮಲ್ಲಿ ಕೆಲವು ಪ್ರಮುಖ ಸಮಸ್ಯೆಗಳಿವೆ. ನಾವು ಕೃತಿಯನ್ನು ಮತ್ತು ಪಠ್ಯವನ್ನು ಒಂದೇ ಎಂಬ ರೀತಿಯಲ್ಲಿ ಪರಿಭಾವಿಸುತ್ತೇವೆ. ಇವುಗಳ ನಡುವೆ ಅನೇಕ ಇರುವ ಈ ಭಿನ್ನತೆಗಳನ್ನು ಒಂದೇ ರೀತಿಯೆಂದು ಯೋಚಿಸುವುದಕ್ಕೆ ಸಾಧ್ಯವಿಲ್ಲ. ಈ ದೃಷ್ಟಿಯಿಂದ ಮೂಲ ವಸ್ತು . ಕೃತಿಕಾರ-ಕೃತಿಯ ವಸ್ತು- ಅದನ್ನು ಓದುಗನು ಪರಿಭಾವಿಸುವ ಕ್ರಮಗಳು ಭಿನ್ನವಾಗುತ್ತಾ ಹೋಗುತ್ತವೆ. ಇವೆಲ್ಲವೂ ಒಂದು ಕೇಂದ್ರದ ಪ್ರಶ್ನೆಗಳಲ್ಲ.

ಗ್ರಂಥವೆನ್ನುವುದನ್ನು ನಾವು ಸಲೀಸಾಗಿ ಬಳಸುತ್ತಿದ್ದರೂ ಅದಕ್ಕೆ ಇರುವ ಅರ್ಥಗಳನ್ನು ನೋಡಿ: 'ಗ್ರಂಥ ಗ್ರಥ್ ಗ್ರಂಥ್', ಎಂಬ ಧಾತುಗಳಿಗೆ ಸಂಸ್ಕೃತದಲ್ಲಿ ಕಟ್ಟು ಒಟ್ಟು, ಸೇರಿಸು, ಜೋಡಿಸು, ಕೂಡಿಸು ಎಂದು ಅರ್ಥ. ಅದು ಓಲೆಗರಿಗಳನ್ನು ಕುರಿತು ಆಗಬಹುದು. ಹೂವುಗಳನ್ನು ಕುರಿತು ಆಗಬಹುದು. ಶಬ್ದಗಳನ್ನು ಕುರಿತೂ ಆಗಬಹುದು. ಇದರಿಂದ ಬಂದ ಶಬ್ದ 'ಗ್ರಂಥ' ನಾಮಪದ. ಜೋಡಿಸಿದ್ದು, ಪೋಣಿಸಿದ್ದು, ಗದ್ಯದಲ್ಲಾಗಲಿ ಪದ್ಯದಲ್ಲಾಗಲಿ ರಚಿಸಿದ ಕಾವ್ಯ ಕಥನ ಇತ್ಯಾದಿ. ಒಂದು ಕಾವ್ಯದ ಅಥವಾ ಪವಿತ್ರಗ್ರಂಥದ ಪಾಠವಾಗಬಹುದು. ಒಂದು ಪವಿತ್ರ ಗ್ರಂಥವಾಗಬಹುದು. ಪುಸ್ತಕ ಎಂಬ ಶಬ್ದಕ್ಕೂ ಅದೇ ಅರ್ಥ. ಜೋಡಿಸು, ಅಣಿಗೊಳಿಸಿ, ಕ್ರಮಗೊಳಿಸು. ಈ ಶಬ್ದಕ್ಕೆ ವಿಶೇಷವಾಗಿ ಒಂದು ಹಸ್ತಪ್ರತಿ ಎಂಬ ಅರ್ಥವೂ ಇದೆ. ಪುಸ್ತಕ ಎಂದರೆ ಸಂಸ್ಕೃತದಲ್ಲಿ ಪುಲ್ಲಿಂಗ, ಪುಸ್ತಕಾ ಎನ್ನುವುದು ಸ್ತ್ರೀಲಿಂಗ. ಅದಕ್ಕೂ 'ಪುಸ್ತ' ಶಬ್ದದ್ದೇ ಅರ್ಥ. ಪುಸ್ತಕದಿಂದ ಹೊತ್ತಿಗೆ ಎಂಬ ತದ್ಭವವಾಗುತ್ತದೆ. ಎರಡಕ್ಕೂ ಒಂದೇ ಅರ್ಥ. ಗ್ರಂಥ ಎಂಬ ಶಬ್ದವನ್ನು ಗಂಭೀರ ವಿಷಯಗಳನ್ನು ಒಳಗೊಂಡ ಸಂಪುಟಗಳಿಗೂ ಪುಸ್ತಕ ಎಂಬುದನ್ನು ಮಿಕ್ಕೆಲ್ಲ ಹೊತ್ತಗೆಗಳಿಗೂ ಅನ್ವಯಿಸುವುದು ಸರಿ. ಆದರೆ ಸಾಮಾನ್ಯವಾಗಿ ಮಾತನಾಡುವಾಗ ಮಾತುಗಾರರು ತಮ್ಮ ಮಾತಿನ ಹಿರಿಮೆಯನ್ನು ಎತ್ತಿ ತೋರಿಸಲು ಗ್ರಂಥ ಶಬ್ದವನ್ನೇ ಎಲ್ಲಕ್ಕೂ ಉಪಯೋಗಿಸುತ್ತಾರೆ. ಸಂಸ್ಕೃತವನ್ನು ಬಲ್ಲವರು ಗ್ರಂಥ ಶಬ್ದವನ್ನು ಹೆಚ್ಚಾಗಿಯೂ ಸಂಸ್ಕೃತದ ತಿಳಿವಳಿಕೆಯಿಲ್ಲದವರು ಪುಸ್ತಕ ಶಬ್ದವನ್ನು ಹೆಚ್ಚಾಗಿಯೂ ಉಪಯೋಗಿಸುತ್ತಾರೆ. ಹಳಗನ್ನಡವನ್ನು ಓದಿಕೊಂಡಿರುವವರು ಅದರ ಪ್ರಭಾವವನ್ನು ಬೀರುವುದಕ್ಕಾಗಿ ಹೊತ್ತಗೆಯನ್ನೇ ಉಪಯೋಗಿಸುತ್ತಾರೆ. ಇದೆಲ್ಲ ವ್ಯಕ್ತಿಗತವಾದ ಪ್ರಯೋಗದ ರೀತಿಗಳು ಅಷ್ಟೇ. ವ್ಯತ್ಯಾಸವೇನೂ ಇಲ್ಲ. ಸಂದರ್ಭಾನುಸಾರ ಆ ಶಬ್ದಗಳನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಬಹುದು. ಇಂಗ್ಲಿಷಿನ (Book/ volume) ಇದ್ದಂತೆ . ಹಳೆಯ ಇಂಗ್ಲಿಷಿನ Boc ನಿಂದ Book ಬಂತು. ಹಳೆಯ ಫ್ರೆಂಚ್ ಭಾಷೆಯ Volum ನಿಂದ Volume ಬಂದಿತು . ಈ ಶಬ್ದಕ್ಕೆ Book ಎಂದೇ ಅರ್ಥ. ( ಇಗೋಕನ್ನಡ 1997-169. )

ಗ್ರಂಥವೆನ್ನುವುದಕ್ಕೆ ಈ ರೀತಿಯ ಅರ್ಥವಿರುವಂತೆಯೇ ಸಾಹಿತ್ಯದ ಸಂದರ್ಭದಲ್ಲಿ ನಾವು ಸಲೀಸಾಗಿ ಬಳಸುತ್ತಿರುವ ಪಠ್ಯ ( ಮೂಲ ಪಠ್ಯ ) ಎನ್ನುವುದಕ್ಕೂ ಅದರ ಮೂಲ ಅರ್ಥಗಳು ಬೇರೆಯೇ ಇವೆ. Text ಎನ್ನುವುದಕ್ಕೆ ಮೂಲ ಪಾಠ; ವಾಕ್ಯವೃಂದ ಎನ್ನುವ ಅರ್ಥಗಳಿವೆ.

ಹಾಗೆಯೇ ಒಂದು ವಾಕ್ಯವೃಂದವು ಬೇರೆ ಬೇರೆ ರೀತಿಯ ಧ್ವನಿಯನ್ನು; ಬೇರೆ ಬೇರೆ ಸೂಚನೆಗಳನ್ನು ಒಳಗೊಂಡಿರುತ್ತವೆ. ಒಂದು ಗ್ರಂಥದಲ್ಲಿರುವ ಅನೇಕ ವಾಕ್ಯವೃಂದಗಳು ಒಂದೇ ರೀತಿಯನ್ನು,ಒಂದೇ ಅರ್ಥವನ್ನು ಸೂಚಿಸುತ್ತದೆಯೆಂದು ಹೇಳಲು ಬರುವುದಿಲ್ಲ. ಈ ದೃಷ್ಟಿಯಿಂದ ಗ್ರಂಥ ಮತ್ತು ಮೂಲ ಪಠ್ಯದ ಪರಿಕಲ್ಪನೆಗಳು ಭಿನ್ನ.

ಕಳೆದ ಅನೇಕ ವರ್ಷಗಳಿಂದ ಸಾಹಿತ್ಯದ ಕೃತಿ ಮತ್ತು ಅದರ ಭಾಷೆಯ ಬಗೆಗೆ ನಮ್ಮ ಆಲೋಚನೆಯ ಕ್ರಮಗಳು ಬದಲಾಗಿವೆ. ಭಾಷೆಯ ಕನಿಷ್ಠ ಘಟಕದಿಂದಲೇ ನಾವು ಸಾಹಿತ್ಯದ ಕುರಿತು ಯೋಚಿಸತೊಡಗಿದ್ದೇವೆ. ಮಾತ್ರವಲ್ಲ, ಹೀಗೆ ನಾವು ಯೋಚಿಸುತ್ತಿರುವಾಗ ಇದರ ಜೊತೆಗೆ; ಮಾರ್ಕ್ಸ್‌ವಾದ; ಭಾಷಾಶಾಸ್ತ್ರ; ಮಾನವಶಾಸ್ತ್ರ ಮನೋವಿಶ್ಲೇಷಣೆ ಮುಂತಾದವುಗಳನ್ನು ಜೊತೆಗೆ ಅನ್ವಯಿಸುತ್ತಿದ್ದೇವೆ. ಸಾಹಿತ್ಯದ ಆಲೋಚನೆಯೆನ್ನುವುದು ಹೇಗೆ ಕನಿಷ್ಠ ಘಟಕದಿಂದ ಶುರುವಾಗುತ್ತಿದೆಯೋ ಅದೇ ರೀತಿಯಲ್ಲಿ ಈ ರೀತಿಯ ವಿಭಿನ್ನ ಶಿಸ್ತು ಸಂಪರ್ಕವು ಕೂಡಾ ಇದರ ಜೊತೆಗೆ ಹಾಸುಹೊಕ್ಕಾಗಿ ಬರುತ್ತಿದೆ. ಆದರೆ ವಿಭಿನ್ನ ಕ್ಷೇತ್ರಗಳ ಚಿಂತನಾ ಕ್ರಮವನ್ನು ನಾವು ಬಳಸಿಕೊಳ್ಳುತ್ತಿರುವಾಗ ಇದಕ್ಕೆ ಯಾವುದೇ ನಿಶ್ಚಲವಾದ ಮತ್ತು ತಟಸ್ಥವಾದ ಅರ್ಥವನ್ನೂ ನಾವು ಕೊಡುತ್ತಿಲ್ಲ. ಪ್ರತಿಯೊಂದು ಶಿಸ್ತು ಕೂಡಾ ಬೇರೆ ಬೇರೆ ರೀತಿಯ ಬೆಳವಣಿಗೆಯನ್ನು ಪಡೆದು ಕೊಳ್ಳುವುದರಿಂದ ಸಹಜವಾಗಿಯೇ ಸಾಹಿತ್ಯದ ಚಿಂತನೆ ಮತ್ತು ಅನ್ಯಶಿಸ್ತುಗಳ ನಡುವಣ ಸಂಬಂಧವು ರೂಪುಗೊಳ್ಳುತ್ತದೆ. ದ್ವಂದ್ವಾತ್ಮಕವಾಗಿ ಈ ರೀತಿಯ ಸಂಬಂಧಗಳು ನಿರ್ವಚನಗೊಳ್ಳುವುದರಿಂದ ಅನ್ಯಶಿಸ್ತುಗಳನ್ನು ಸಾಹಿತ್ಯದ ಚಿಂತನೆಯಲ್ಲಿ ಬಳಸಿಕೊಳ್ಳುವುದು ಎಂದರೆ ಅದು ಸಾಂಪ್ರದಾಯಿಕವಾಗಿ ಅವಲಂಬಿಸಿಕೊಂಡು ಸಾಹಿತ್ಯದ ನಿರ್ವಚನ ಮಾಡುವುದು ಎಂದರ್ಥವಲ್ಲ.

ಅನ್ಯಶಿಸ್ತುಗಳ ಚಟುವಟಿಕೆ ಮತ್ತು ಮೌಲ್ಯಗಳು ಸಂಶೋಧನೆಯ ಮೇಲೆ ಪ್ರಭಾವ ಬೀರುತ್ತಿರುವಂತೆಯೇ ಜ್ಞಾನ ಶಾಖೆಯನ್ನು ವಿಸ್ತರಿಸಲು ಸಾಧ್ಯವಾಗುತ್ತದೆ. ಹೀಗಾಗಿ ಅನ್ಯ ಶಿಸ್ತುಗಳ ಬಳಕೆಯೆಂಬ ಸಂಗತಿಯು ತೀರಾ ಶಾಂತಿಯುತವಾಗಿ ನಡೆಯುವ ಕೆಲಸವೇನೂ ಅಲ್ಲ. ಅನ್ಯಶಿಸ್ತುಗಳ ಬಳಕೆಯಿಂದ ನಮ್ಮ ಹಳೆಯ ಚಿಂತನೆಯ ಕ್ರಮವು ಭೇದಗೊಳ್ಳುತ್ತದೆ. ಹಾಗೆ ನೋಡಿದರೆ ಹಳೆ ಮಾದರಿಯ ನಮ್ಮ ಸಾಹಿತ್ಯದ ಚಿಂತನೆಯ ಕ್ರಮದಲ್ಲಿ ಇದ್ದ ಶಿಸ್ತು ಈ ರೀತಿಯ ಅನ್ಯಶಿಸ್ತುಗಳ ಬಳಕೆಯಿಂದ ಭೇದಗೊಳ್ಳುತ್ತದೆ. ಇದರಿಂದ ನಮ್ಮ ಜ್ಞಾನದ ಬಗೆಗೆ ಇರುವ ಕಲ್ಪನೆಗಳು, ನಂಬಿಕೆಗಳು ಹೊರಟು ಹೋಗುತ್ತವೆ. ಸಾಹಿತ್ಯದ ಚಿಂತನೆಯೆಂದರೆ ಅನ್ಯಶಿಸ್ತುಗಳ ಬಳಕೆಯಿಂದ ಉಂಟಾಗುವ ವಾಗ್ವಾದವೆಂದು ಪರಿಭಾವಿಸಿಕೊಂಡರೆ ಆಗ ನಮ್ಮ ಜ್ಞಾನ ರೂಪಗಳ ಸಾಧ್ಯತೆಗಳೇ-ಬದಲಾಗುತ್ತವೆ. ಅಷ್ಟೇ ಅಲ್ಲ, ಸಾಹಿತ್ಯದಲ್ಲಿ ಹೊಸ ಭಾಷೆ ಮತ್ತು ಹೊಸ ರೀತಿಯ ಚಿಂತನಾಕ್ರಮಗಳು ಹಾಜರಾಗುತ್ತವೆ. ಉದಾಹರಣೆಗೆ, ಯಶೋಧರಚರಿತೆ'ಕೃತಿಯನ್ನು ಸಾಂಪ್ರದಾಯಿಕವಾದ ಕ್ರಮದಲ್ಲಿ ಓದಿ- ಅದರ ವಿವರಣೆಯನ್ನು ಮಾಡುತ್ತಿದ್ದಾಗ ಅದೇನೂ ಅಂಥ ಸಮಸ್ಯಾತ್ಮಕವಾದ ಕೃತಿಯೆಂದು ನನಗ ಅನಿಸಿರಲಿಲ್ಲ. ಯಶೋಧರ ಚರಿತೆಯಲ್ಲಿ ಅಮೃತಮತಿಯು ವಿಕಾರಿಯಾದ ಮಾವುತನಿಗೆ ಮರುಳಾಗಿರುವುದು ಅವಳ ನೈತಿಕ ಅಧಃಪತನದಂತೆ ಮಾತ್ರ, ಕನ್ನಡದ ಹಿರಿಯ ವಿದ್ವಾಂಸರಿಗೆ ಕಂಡಿತು ಮತ್ತು ಅದನ್ನೇ ಓದುಗರಿಗೆ ತಿಳಿಯ ಹೇಳಿದರು. ಆದರೆ ಜಿ. ರಾಜಶೇಖರ್ (ಜನ್ನನ ಯಶೋಧರ ಚರಿತೆಯ ದ್ವಂದ್ವವಿನ್ಯಾಸ) ಬೇರೆ ಬೇರೆ ಶಿಸ್ತುಗಳಿಂದ ಓದತೊಡಗಿದಾಗ ನಮಗೆ ಎರಡು ರೀತಿಯ ಅನುಕೂಲಗಳಾದವು. ಒಂದು ಹಳೆಯ ಮಾದರಿಯ ಚಿಂತನಾ ಕ್ರಮ ಭಿನ್ನವಾಗಿ ಕೃತಿಯೊಂದನ್ನು ಹೇಗೆ ಓದಬಹುದು ಎಂಬುವರ ಸೂಚನೆ. ಎರಡನೆಯದಾಗಿ, ಈ ವಿಮರ್ಶಕರು ಬಳಸಿಕೊಂಡ ಹೊಸ ಮಾದರಿಯ ಭಾಷೆ. ಮುಖ್ಯವಾಗಿ ವಿಭಿನ್ನ ಶಿಸ್ತುಗಳು, ಈ ಎರಡೂ ಅನುಕೂಲಗಳು ನಮ್ಮ ಹಳೆಯ ಮಾದರಿಯ ಓದನ್ನು ಒಂದು

ರೀತಿಯಲ್ಲಿ ಛಿದ್ರಗೊಳಿಸಿದವು. ಅಂದರೆ ಅನ್ಯಶಿಸ್ತುಗಳ ಬಳಕೆಯಿಂದಾಗಿ ಒಂದು ಸಾಹಿತ್ಯ ಕೃತಿಯ ಚಿಂತನಾ ಕ್ರಮವು ಬದಲಾಗುತ್ತದೆ. ಮತ್ತು ಅಲ್ಲಿ ಹೊಸ ಪರಿಭಾಷೆಗಳು ಮತ್ತು ಹೊಸ ರೀತಿಯ ಪರಿಕಲ್ಪನೆಗಳು ಶುರುವಾಗುತ್ತವೆ

ಸಾಹಿತ್ಯ ಮತು ಅನ್ಯಶಿಸ್ತು ಎಂಬ ಚಿಂತನಯ ಕ್ರಮವನ್ನು ನೋಡಿ , ಈ ರೀತಿಯ ಚಿಂತನಯ ಕ್ರಮವು ಸಾಹಿತ್ಯಕ್ಕೆ ಬರುವಾಗಲೇ ಕೆಲವು ರೀತಿಯ ವರ್ಗೀಕರಣಗಳನ್ನು ಮಾಡಿಕೊಳ್ಳುತ್ತದೆ ಹಾಗೂ ಈ ವರ್ಗೀಕರಣಗಳು ಅಷ್ಟು ಸುಲಭವಾಗಿ ವರ್ಗೀಕರಿಸಬಹುದಾದ ಮಾದರಿಗಳೇನೂ ಅಲ್ಲ. ಅನ್ಯಶಿಸ್ತು ಎನ್ನುವುದು ಒಂದು ಸಾಹಿತ್ಯ ಕೃತಿಯ ಬೇರೆ ಬೇರೆ ವಿಚಾರಗಳನ್ನು ಪರೀಕ್ಷಿಸಲು ಸಹಾಯ ಮಾಡುತ್ತದೆ. ಅಷ್ಟೇ ಅಲ್ಲ. ಕೆಲವು ರೀತಿಯ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತದೆ. ಅನೇಕ ಸಂದರ್ಭಗಳಲ್ಲಿ ಕೃತಿಯೊಂದು ಹೀಗೆ ಅನ್ಯಶಿಸ್ತುಗಳ ಮುಖೇನ ಮಾರ್ಪಾಡಿಗೆ ಒಳಗಾಗುವಾಗ ಪೂರ್ಣವಾಗಿಯೇ ವರ್ಗೀಕರಣ ಹೊಂದಬಹುದು ಮತ್ತು ಅನ್ಯಶಿಸ್ತುಗಳ ಬಗೆಗಿನ ಶಾಸ್ತ್ರೀಯ ತಿಳುವಳಿಕೆಯೇ ಒಂದು ಕೃತಿಯನ್ನು ಕುರಿತು ಚಿಂತಿಸುವಾಗ 'ಕೃತಿ ಮತ್ತು ಅವುಗಳ ಎಂಬ ವರ್ಗೀಕರಣಗಳೇ ಮಾಯವಾಗುವುದು ಅನ್ಯಶಿಸ್ತುಗಳನ್ನು ನಾವು ಬಳಸಿಕೊಳ್ಳುವ ಕ್ರಮದಿಂದಲೇ 'ಸಾಹಿತ್ಯ ಮತ್ತು ಚರಿತ್ರೆ' 'ಸಾಹಿತ್ಯ ಮತ್ತು ಮಾರ್ಕ್ಸ್‌ವಾದ' ಸಾಹಿತ್ಯ ಮತ್ತು ಮನೋವಿಜ್ಞಾನ'ವೆಂದು ನಾವು ಅಧ್ಯಯನ ಕ್ರಮದಲ್ಲಿ ಅನ್ಯಶಿಸ್ತುಗಳನ್ನು ನಿರಂತರವಾಗಿ ಈಚಿನ ವರ್ಷಗಳಲ್ಲಿ ಬಳಸುತ್ತಲೇ ಬಂದಿದ್ದೇವೆ. 'ಸಾಹಿತ್ಯ ಮತ್ತು ಚರಿತ್ರೆ ' ಎಂದು ಹೇಳುವುದಕ್ಕೂ 'ಸಾಹಿತ್ಯ ಚರಿತ್ರೆ' ಎಂದು ಹೇಳುವುದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿ 'ಸಾಹಿತ್ಯ ಮತ್ತು ಚರಿತ್ರೆ'ಯೆಂದು ನಾವು ಕರೆಯುವಾಗ ಅಲ್ಲಿ ವರ್ಗೀಕರಣಗಳಿವೆ. ಸಾಹಿತ್ಯ ಚರಿತ್ರೆಯೆಂದು ನಾವು ಕರೆಯುವಾಗ ಅಲ್ಲಿ ' ಮತ್ತು' ಎಂಬ ತಡೆಯಿಲ್ಲವಾದರೂ ಕೂಡಾ ಗೃಹೀತವಾದ ವರ್ಗೀಕರಣವೊಂದು ಅಂತಸ್ಥವಾಗಿ ರೂಪುಗೊಂಡಿದೆ. ಎಂದರೆ 'ಸಾಹಿತ್ಯ ಚರಿತ್ರೆ'ಯೆನ್ನುವುದು ಉಳಿದ ಚರಿತ್ರೆಗಿಂತ ಭಿನ್ನವಾಗಬಹುದು. ಹಾಗೆಯೇ ಚರಿತ್ರೆಯೆಂದು ಬಳಸುವಾಗ ಮತ್ತೊಂದು ಪರಿಕಲ್ಪನೆಯನ್ನು ನಾವು ಪರೀಕ್ಷಿಸುವ ಗೋಜಿಗೆ ಹೋಗುವುದಿಲ್ಲ. 'ಚರಿತ್ರೆ'ಯೆಂದರೆ ಯಾವ ಚರಿತ್ರೆ? ನಮ್ಮ ಚರಿತ್ರೆ,ಈಗಿನ ಚರಿತ್ರೆ,ಸಾಹಿತ್ಯ ಚರಿತ್ರೆ, ಈ ರೀತಿಯ ಪರಿಕಲ್ಪನೆಗಳು ಸದಾ ಭಿನ್ನವಾಗಿಯೇ ಇರುತ್ತೇವೆ. 'ಸಾಹಿತ್ಯ ಮತ್ತು ಚರಿತ್ರೆ'ಎಂದು ನಾವು ಬಳಸುವಾಗ ಯಾವುದನ್ನು ಬಳಸಿಕೊಳ್ಳುತ್ತಿದ್ದೇವೆ? ಅದೇ ರೀತಿಯಲ್ಲಿ ನಮ್ಮ ಚರಿತ್ರೆಯೆಂಬ ಪರಿಕಲ್ಪನೆಯು ಒಂದು ಬಗೆಯದಾದರೆ. 'ಈ ದಿನ ಚರಿತ್ರೆಯ' ಪರಿಕಲ್ಪನೆಯು ಮತ್ತೊಂದು ಬಗೆಯದು. 'ನಮ್ಮ ಚರಿತ್ರೆ' ಎನ್ನುವುದು ಚರಿತ್ರೆಯ ಬಗೆಗೆ ವಿಶೇಷಗುಣವನ್ನು ಸೂಚಿಸುವಂತಿದ್ದರೆ, 'ಈದಿನದ ಚರಿತ್ರೆ'ಯೆನ್ನುವುದು ಬೇರೆಯೇ ಮಾದರಿಯನ್ನು ಸೂಚಿಸುತ್ತದೆ. ಈ ಮಾತನ್ನು ಹೇಳಲು ಕಾರಣವಿಷ್ಟೇ. 'ಸಾಹಿತ್ಯ ಮತ್ತು ಅನ್ಯಶಿಸ್ತು'ಎಂಬ ಪರಿಕಲ್ಪನೆಯನ್ನೂ ಅತ್ಯಂತ ಸುಲಭವಾಗಿ ಮತ್ತು ಸುಲಲಿತವಾಗಿ ಬಳಸುವುದು ಅಸಾಧ್ಯವಾದ ಸಂಗತಿಯಾಗಿದೆ.

ಸಾಹಿತ್ಯ ಮತ್ತು ಅನ್ಯಶಿಸ್ತುಗಳ ನಡುವಣ ಸಂಬಂಧವು ಸುಲಭವಲ್ಲ ಎಂದರೂ. ಈ ರೀತಿಯ ಅನ್ಯಶಿಸ್ತುಗಳ ಬಳಕೆಯಿಂದಾಗಿ ಸಾಹಿತ್ಯದ ಬಗೆಗಿನ ಚಿಂತನಾ ಕ್ರಮವು ಬದಲಾಗಿದೆಯೆಂಬುದೂ ನಿಜ. ಉದಾಹರಣೆಗೆ: ಐನ್‌ಸ್ಟೈನನ ವಸ್ತುಸಾಪೇಕ್ಷ ಸಿದ್ಧಾಂತವು ( Relativity of reference points.) ವಸ್ತುವಿನ ಅಧ್ಯಯನವನ್ನೇ ಒಳಗೊಂಡಿದ್ದರೆ ವಸ್ತುವಿನ ಅಧ್ಯಯನವು ಮಾರ್ಕ್ಸ್‌ವಾದ ಮತ್ತು ರಚನಾವಾದದಲ್ಲಿಯೂ ಇದೆ. ಫ್ರಾಯ್ಡ್‌ನ ಸಿದ್ಧಾಂತದಲ್ಲಿಯೂ ಈ ರೀತಿಯ ಚರ್ಚೆಗಳಿವೆ. ಅಂದರೆ ಪ್ರತಿಯೊಂದು ಅಧ್ಯಯನ ಕ್ಷೇತ್ರವೂ ಹಳೆಯದರ ನಿರಾಕರಣೆ ಮತ್ತು ಹೊಸದರ ಬಗೆಗಿನ ಬಯಕೆಗಳಿಂದ ಸ್ಫೂರ್ತಿಗೊಂಡು ರೂಪುಗೊಳ್ಳುತ್ತದೆ. ರಚನಾವಾದಿ ಚಿಂತನೆಯ ಕ್ರಮದಲ್ಲಿಯೂ

ವಸ್ತುವಿನ ಬಗೆಗಿನ ಚರ್ಚೆಯು ಬೇರೆ ಬೇರೆ ರೀತಿಯಲ್ಲಿ ನಿರ್ವಚನಗೊಂಡಿದೆ. ರಚನಾವಾದದ ಮೂಲ ತಿಳುವಳಿಕೆಯನ್ನು ನೋಡಿ: ಇದು ಬರಹಗಾರ - ಬರಹ, ಓದುಗರ ನಡುವಣ ಸಂಬಂಧವನ್ನು ನಿರ್ದೇಶಿಸಿತು. ಬರಹಗಾರ ಬರಹ-ಓದುಗರ ನಡುವಣ ಸಂಬಂಧದಲ್ಲಿಯೂ ವಸ್ತು ಸಾಪೇಕ್ಷತೆಯ ಅರಿವು ಮುಖ್ಯವಾಯಿತು. ಹಳಯ ಪಾರಂಪರಿಕವಾದ ವರ್ಗೀಕರಣವು ಈ ರೀತಿಯ ಸಾಪೇಕ್ಷ ತಿಳುವಳಿಕೆಯಲ್ಲಿ ನಿರಾಕರಣೆಗೆ ಒಳಗಾಯಿತು. ಸಾಪೇಕ್ಷ ತಿಳುವಳಿಕೆಯೆಂದರೆ ಅನ್ವಶಿಸ್ತುಗಳ ಸಂದರ್ಭದಲ್ಲಿ ವಿಭಿನ್ನ ಮಾದರಿಗಳೇ ಆಗಿರುತ್ತದೆ. ಒಂದು ಕೃತಿಯ ವಸ್ತುವನ್ನು ವಿಭಿನ್ನಶಿಸ್ತುಗಳ ಚಿಂತಕರು ಬೇರೆ ಬೇರೆ ಮಾದರಿಗಳಲ್ಲಿ ಗ್ರಹಿಸಲು ಶಕ್ಯವಿದೆ. ಇದರಿಂದಾಗಿ ಒಂದು ಕೃತಿಯ ಪಠ್ಯವು ಹಳೆಯ ಮಾದರಿಗೆ ವಿದಾಯವನ್ನು ಹೇಳಿ ಹೊಸ ಚಿಂತನೆಯ ಕ್ರಮದಲ್ಲಿ ವಿಭಿನ್ನ ಚಹರೆಗೆ ಒಳಗಾಗಿದೆ. ಒಂದು ಪಠ್ಯವನ್ನು ಆಧುನಿಕ ಸಂದರ್ಭದಲ್ಲಿ ಹೇಗೆ ಗ್ರಹಿಸಲಾಗುತ್ತದೆ ಮತ್ತು ಪಠ್ಯದ ಕೇಂದ್ರದ ಪರಿಕಲ್ಪನೆಯನ್ನು ಈಗ ಯಾವ ರೀತಿಯಲ್ಲಿ ಸಂಯೋಜಿಸಲಾಗಿದೆ ಎಂಬುದನ್ನು ನಾವೀಗ ಗಮನಿಸಬಹುದು.

ಯಾವುದೇ ಒಂದು ಪಠ್ಯವೆಂದರೆ ಅದು ವಸ್ತುವಲ್ಲ. ಅಥವಾ ಯಾವುದೇ ಒಂದು ಪಠ್ಯದ ಕುರಿತು ಯೋಚಿಸುವುದೆಂದರೆ ಅದು ವಸ್ತುವಿನ ಗ್ರಹಿಕೆಯೂ ಅಲ್ಲ. ಯಾವುದೇ ಒಂದು ಗ್ರಂಥವನ್ನು ಅದರ ಆಂತರಂಗಿಕವಾದ ಪಠ್ಯದಿಂದ ಬೇರ್ಪಡಿಸಿ ನೋಡುವುದು ಅಸಾಧ್ಯ. ಒಂದು ಕೃತಿಯನ್ನು ಸಮಗ್ರ ಮತ್ತು ಶಾಸ್ತ್ರೀಯವೆಂತಲೂ , ಪಠ್ಯವನ್ನು ಕೇವಲ ಪ್ರಯೋಗಾತ್ಮಕವೆಂತಲೂ ಕರೆಯುವಾಗ ವಿಶೇಷವಾದ ಎಚ್ಚರಿಕೆ ವಹಿಸಬೇಕಾಗುತ್ತದೆ. ಈ ವ್ಯತ್ಯಾಸವು ತುಂಬಾ ಬರಡಾದ ವಿಭಜನೆಯಾಗಿದ್ದು ಆಧುನಿಕ ಸಂದರ್ಭದಲ್ಲಿ ಈ ವರ್ಗೀಕರಣವು ಪದೇ ಪದೇ ಪುನರುಕ್ತವಾಗುತ್ತಲೇ ಇರುತ್ತದೆ. ಗ್ರಂಥಗಳಿಗೆ ಗ್ರಂಥಾಲಯದಲ್ಲಿ ಅವಕಾಶವಿದ್ದರೆ ಪಠ್ಯವೆನ್ನುವುದು ತಾರ್ಕಿಕವಾಗಿ ರೂಪುಗೊಂಡಿರುವುದು.

ಜೇಕೊಸ್‌ಲ್ಯಾಕನ್. ಎರಡು ಪರಿಭಾಷೆಗಳನ್ನು ಪರಿಚಯಿಸುತ್ತಾನೆ. 'ವಾಸ್ತವ' ಮತ್ತು 'ವಾಸ್ತವತೆ' ಈ ಎರಡು ಪದಗಳು ನಿಕಟವಾಗಿದ್ದರೂ ಭಿನ್ನತೆಗಳನ್ನು ಸ್ಥಾಪಿಸಿಕೊಂಡಿವೆ. 'ವಾಸ್ತವ' ಎನ್ನುವುದು ಸ್ಪಷ್ಟ ಹಾಗು ಗೊಂದಲವಾಗುವ ಮಾದರಿಯಲ್ಲಿ ಇರುತ್ತದೆ. ಆದರೆ ವಾಸ್ತವತೆ ಎನ್ನುವುದು ವಾಸ್ತವದ ಪ್ರದರ್ಶಾತ್ಮಕ ರೂಪ. ಹೀಗಾಗಿ ನಾವು ಈ ಎರಡು ಪದಗಳನ್ನು ಭಿನ್ನ ನೆಲೆಗಳಲ್ಲಿ ಬಳಸಿಕೊಳ್ಳುತ್ತಿರುತ್ತೇವೆ. ವಾಸ್ತವ ಎನ್ನುವುದು ವಾಸ್ತವತೆಗೆ ಸಂವಾದಿಯಾಗಿ ಬಳಸುವುದು ಅಸಾಧ್ಯ. ಅದೇ ರೀತಿಯಲ್ಲಿ ಗ್ರಂಥ ಎನ್ನುವುದನ್ನು 'ಪಠ್ಯ' ಎನ್ನುವುದಕ್ಕೆ ಸಂವಾದಿಯಾಗಿ ಬಳಸುವುದು ಅಸಾಧ್ಯ, ಗ್ರಂಥಗಳು ಎನ್ನುವುದನ್ನು ನಾವು ಬೇರೆ ಬೇರೆ ಮಾದರಿಯಲ್ಲಿ ಗುರುತಿಸುತ್ತೇವೆ. ಗ್ರಂಥಗಳು ಪುಸ್ತಕದ ಅಂಗಡಿಗಳಲ್ಲಿ ಕಾರ್ಡ್-ಕೆಟಲಾಗ್‌ಗಳಲ್ಲಿ. ಗ್ರಂಥಾಲಯದ ರ್‍ಯಾಕ್‌ಗಳಲ್ಲಿ ಕಾಣಸಿಗುತ್ತದೆ. ಆದರೆ ಪಠ್ಯವೆನ್ನುವುದು ಹಾಗಲ್ಲ ಪಠ್ಯವು ಭಾಷೆಯನ್ನು ಹೊಂದಿರುತ್ತದೆ. ಹಾಗಾಗಿ ಪಠ್ಯವು ಸಂವಹನದಲ್ಲಿ ತನ್ನ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಪಠ್ಯವು ಕೃತಿಯನ್ನು ಸಂಯೋಜಿಸುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ಗ್ರಂಥವು ಪಠ್ಯದ ಕಾಲ್ಪನಿಕ ಬಾಲ ಅಷ್ಟೆ: ಬೇರೆ ಮಾತನ್ನು ಬಳಸಬೇಕಿದ್ದರೆ ಪಠ್ಯವು ಕ್ರಿಯಾತ್ಮಕ ಚಟುವಟಿಕೆಯ ಮೂಲಕ , ಅದರ ಉತ್ಪಾದನಾ ಕ್ರಮದ ಮೂಲಕ ನಮ್ಮ ಅನುಭವಕ್ಕೆ ಬರುತ್ತದೆ. ಹೀಗಾಗಿ ಪಠ್ಯವು ಗ್ರಂಥಾಲಯದ ಕಪಾಟುಗಳಲ್ಲಿಯೇ ನಿಲ್ಲುವುದಿಲ್ಲ. ಅದು ಪ್ರಯಾಣ ಬೆಳೆಸುತ್ತದೆ. ಅನೇಕ ಗ್ರಂಥಗಳನ್ನು ದಾಟಿಕೊಂಡು ಹೋಗುತ್ತದೆ. ಪಠ್ಯಕ್ಕೆ ಇರುವ ಸಾಧ್ಯತೆಯೇ ಈ ಬಗೆಯದು. ಪಠ್ಯವೆನ್ನುವುದು ಸಾಹಿತ್ಯದಲ್ಲಿಯೇ ನಿಲ್ಲುವ ಪ್ರಶ್ನೆಯಲ್ಲ. ಮತ್ತು ಅದಕ್ಕೆ ವಂಶಾನುಕ್ರಮತೆಯ ಪ್ರಶ್ನೆಯೂ ಬರುವುದಿಲ್ಲ. ಶಿರಾಸರಳವಾದ ಬೇರೆ ಬೇರೆ ರೂಪಗಳಿಗೆ ಪಠ್ಯಗಳನ್ನು ಒಳಪಡಿಸಲು ಬರುವುದಿಲ್ಲ. ಪಠ್ಯಗಳ ಆಧಾರದಿಂದಲೇ ಲೇಖಕರನ್ನು ವರ್ಗೀಕರಿಸುವುದು ಅಸಾಧ್ಯವಾದ ಕೆಲಸ. ಉದಾಹರಣೆಗೆ ಪಂಪನನ್ನು

ಕವಿಯೆಂದು ಕರೆಯುವುದು : ಕಾರಂತರನ್ನು ಕಾದಂಬರಿಕಾರ ಎಂದು ಗುರುತಿಸುವುದು ಇತ್ಯಾದಿ. ಆದರೆ ಹೀಗೆ ಗುರುತಿಸುವಾಗ ನಾವೇನು ತೀರಾ ಖಚಿತವಾಗಿ ಅವರನ್ನು ಗುರುತಿಸಲು ಬರುವುದಿಲ್ಲ. ಕಾರಂತರು ಕಾದಂಬರಿಕಾರರೇ; ವೈಜ್ಞಾನಿಕ ಲೇಖಕನಗಳ ಕರ್ತೃವೇ? ಮಾನವತಾವಾದಿಯೆ? ಅವರ ಬರವಣಿಗೆಯ ಕ್ರಮಗಳು ಭಿನ್ನವಾಗುತ್ತಾ ಬಂದಿಲ್ಲವೆ? ಈ ದೃಷ್ಟಿಯಿಂದ ಕಾರಂತರ ಬರವಣಿಗೆಗಳನ್ನು ಕುರಿತು ನಾವು ಕಂಡುಕೊಳ್ಳಬಹುದಾದ ಉತ್ತರವು ಅನಿಶ್ಚಿತ. ಇದೇ ಸಮಸ್ಯೆಯು ತೇಜಸ್ವಿಯವರ ಬರವಣಿಗೆಗೂ ಸಲ್ಲುತ್ತದೆ. ಪಠ್ಯಗಳ ಆಧಾರದ ಮೇಲೆ ಲೇಖಕರನ್ನು ವರ್ಗೀಕರಿಸುವುದು ಅಸಾಧ್ಯದ ಕೆಲಸ . ಹಾಗೆ ನೋಡಿದರೆ ಪ್ರತಿಯೊಂದು ಪಠ್ಯವೂ ತನ್ನ ನಿಯಮಗಳ ಆಚೆಗೆ ದಾಟುತ್ತವೆ ಮತ್ತು ಪಠ್ಯವು ಯಾವಾಗಲೂ ವಿರೋಧಾಭಾಸದಿಂದ ಕೂಡಿಕೊಂಡಿರುತ್ತದೆ.

ಸೂಚನೆಗೆ ಅನುಸಾರವಾಗಿ ನಾವು ಪಠ್ಯವನ್ನು ಗ್ರಹಿಸಲು ಸಾಧ್ಯ. ಆದರೆ ಗ್ರಂಥವು ಅದರಷ್ಟಕ್ಕೆ ಅದು ಸೂಚಿತದ ( ಓದುಗ) ಹತ್ತಿರ ವಿರುತ್ತದೆ. ಸೂಚನೆಯನ್ನು ಸೂಚಿತವು ಸ್ವೀಕರಿಸುವ ಮಾದರಿಯಲ್ಲಿ ಎರಡು ಮಾದರಿಗಳಿರುತ್ತದೆ ಒಂದನೆಯದು ಸೂಚನೆಯನ್ನು ಅಕ್ಷರ ವಿಜ್ಞಾನವಾಗಿ ಗ್ರಹಿಸುವ ವಿಧಾನ. ಎರಡನೆಯದು ಸೂಚನೆಯನ್ನು ಬಿಟ್ಟು ಸೂಚಕನನ್ನು ಅರಸುವುದು. ಹಾಗೆ ನೋಡುವುದೆಂದರೆ ಲಿಖಿತ ಸೂಚನೆಗಳಲ್ಲಿ ಸೂಚಕನು ಅದೃಶ್ಯನಾಗಿರುತ್ತಾನೆ. ರಹಸ್ಯ ಹಾಗೂ ಗುಪ್ತ ಸೂಚಕನನ್ನು ಬೇರೆ ಬೇರೆ ರೀತಿಯ ಅನ್ವಯದ ಮೂಲಕ ಗುರುತಿಸುವ ಪ್ರಯತ್ನಗಳಂತೂ ಇದ್ದೇ ಇರುತ್ತದೆ. ಉದಾಹರಣೆಗೆ ಮಾರ್ಕ್ಸ್‌ವಾದಿ ಅನ್ವಯ; ಮನಃಶಾಸ್ತ್ರೀಯ ಅನ್ವಯ ಇತ್ಯಾದಿ. ಹೀಗೆ ಅನ್ವಯವನ್ನು ಮಾಡುವಾಗ ನಾವು ಅನೇಕ ಸಾರಿ 'ಅರ್ಥಹಿಂಸೆ'ಯನ್ನು ವಿಭಿನ್ನ ಅನ್ವಯಗಳನ್ನೂ ಮಾಡುತ್ತಿರುತ್ತೇವೆ. ಗ್ರಂಥವು ಸಾರ್ವತ್ರಿಕ ಸೂಚನೆಯಾಗಿ ಕೆಲಸ ನಿರ್ವಹಿಸುತ್ತದೆ. ನಾಗರಿಕತೆಯ ಅಂಗವಾಗಿ ಗ್ರಂಥಕ್ಕೆ ಪ್ರಾಶಸ್ತ್ಯವಿದೆ. ಆದರೆ ಪಠ್ಯವು ಸೂಚಕನನ್ನು ಅವಲಂಬಿಸುವಂಥದ್ದು , ಸೂಚಕನ ಆಲೋಚನೆಯ ಆಟವಾಗಿ ಪಠ್ಯವು ರೂಪುತಳೆಯುತ್ತದೆ. ಪಠ್ಯವು ಪೂರ್ಣವಾಗಿ ಸಾಂಕೇತಿಕವಾದುದು. ಪಠ್ಯಕ್ಕೆ ಭಾಷೆಯ ಮುಖ ಇರುವುದರಿಂದ ಇದನ್ನು ರೂಪಿಸಬಹುದು. ವಿಕೇಂದ್ರೀಕರಿಸಬಹುದು. ಪಠ್ಯ ಎನ್ನುವುದು ಸಾಂಕೇತಿಕವಾದುದು. ಇದರ ಬಗೆಗೆ ಯಾವ ಅನುಮಾನವೂ ಇಲ್ಲ. ಹಾಗೆಯೇ ಒಂದು ಪಠ್ಯವನ್ನು ಸಂಯೋಜಿಸುವುದು ಸೂಚಕನೇ ಆಗಿದ್ದರೂ, ಅವನು ಸೂಚನೆಯ ಮೂಲ ಅರ್ಥಗಳನ್ನೇ ಬಳಸುತ್ತಾನೆ ಎಂದು ಭಾವಿಸುವಂತಿಲ್ಲ. ಹೀಗಾಗಿಯೇ ಒಂದು ಪಠ್ಯಕ್ಕೆ ತುಂಬಾ ತಾರ್ಕಿಕವಾದ ರಚನೆಯ ಕ್ರಮವೊಂದಿದೆ ಎಂದು ಹೇಳುವಂತಿಲ್ಲ. ಒಂದು ಗ್ರಂಥವೆಂದು ಯಾವುದನ್ನು ಗುರುತಿಸುತ್ತೇವೋ ಅದು ಒಂದೆಡೆಗೆ ನಿಂತರೆ, ಪಠ್ಯವೆನ್ನುವುದು ಅದರಾಚೆಗೂ ಚಲಿಸುತ್ತದೆ. ಅದಕ್ಕೆ ಸ್ವಾತಂತ್ರ್ಯವಿದೆ. ಪಠ್ಯವು ಗ್ರಂಥದಲ್ಲಿಯೇ ಬಂಧಿತವಾದುದಲ್ಲ.

'ಹಾಗೆಯೇ ಪಠ್ಯವೆನ್ನುವುದು ಬಹುಮುಖಿಯಾಗಿರುವಂಥದ್ದು. ಅದರ ಅರ್ಥ ಪಠ್ಯಕ್ಕೆ ಬಹು ಅರ್ಥಗಳು ಇವೆಯೆಂದಲ್ಲ.- ಅನೇಕ ಅರ್ಥಗಳು ಪಠ್ಯಕ್ಕೆ ಸಂಪ್ರಾಪ್ತವಾಗುತ್ತದೆಯೆಂದು ಮಾತ್ರ. ಪಠ್ಯವನ್ನು ಬಟ್ಟೆಗೆ ಹೋಲಿಸಿದರೆ . ಅರ್ಥವು ಅದರ ನೂಲಿನ ಹೊದಿಕೆಯಂತಿರುತ್ತದೆ. ಹಾಗಾಗಿ ಪಠ್ಯದ ಬಹುಮುಖತೆಯು ಅಸ್ಪಷ್ಟತೆಯಿಂದ ಕೂಡಿರುವುದಿಲ್ಲ. ಓದುಗನು ಅನೇಕ ವಿಷಯವನ್ನು ಮನಸ್ಸಿನಲ್ಲಿ ಇಟ್ಟು ಕೊಂಡೇ ಓದುತ್ತಾನೆ. ಹಾಗೆ ನೋಡಿದರೆ, ಒಂದು ಕೃತಿಯಲ್ಲಿ ಇರುವ ವಿಷಯವನ್ನು ಓದುಗನು ತನ್ನ ಕಲ್ಪನೆಗೆ ಅನುಸಾರವಾಗಿ ಓದಿಕೊಳ್ಳುತ್ತಾನೆ. ಹೀಗಾಗಿ ಕೃತಿಯಲ್ಲಿನ ಓದು ಎನ್ನುವುದು ಓದುಗನ ಅಪರಿಚಿತವಾದ ಭಾವನೆಗಳಿಗೆ ಅನುಸಾರವಾಗಿ ರೂಪುಗೊಳ್ಳುತ್ತದೆ. ಹೊರಗಿನ ಪ್ರಪಂಚದಲ್ಲಿ ಇರುವ ಬೆಳಕು : ಬಣ್ಣ: ಗಾಳಿ: ಶಬ್ದ: ಹಕ್ಕಿಗಳ ದನಿ: ಮಕ್ಕಳ ಅಳು: ಹಾಗೆಯೇ ಇನ್ನೊಂದು ಬದಿಯಲ್ಲಿ ಹೊರಗಿನ ಪ್ರಪಂಚದ ಅನುಕರಣೆ ಇತ್ಯಾದಿಗಳು ತಮ್ಮ ತಮ್ಮದೇ ಆದ

ರೀತಿಯ ಸಾಂಜ್ಞಿಕ ರೂಪವನ್ನು ಹೊಂದಿರುವ ಹಾಗೆಯೇ ಪರಸ್ಪರ ಭಿನ್ನವಾಗಿಯೂ ಇರುತ್ತವೆ. ಗ್ರಂಥದಲ್ಲಿನ ಪಠ್ಯದ ಸಂಗತಿಯೂ ಅಷ್ಟೆ; ಪಠ್ಯವು ಬೇರೆ ಬೇರೆ ಧ್ವನಿಗಳಿಂದ, ಮಾತುಗಳಿಂದ, ಆಧಾರಗಳ ಹೊಲಿಗೆಯಿಂದ ಕೂಡಿಕೊಂಡಿರುತ್ತದೆ. ಇವೆಲ್ಲಾ ಸಾಂಸ್ಕೃತಿಕ ಭಾಷೆಯಾಗಿದ್ದು, ಭೂತಕಾಲವನ್ನೋ ವರ್ತಮಾನದ ಕ್ಷಣವನ್ನೋ ಹಿಡಿಯುತ್ತಾ ಒಂದರಿಂದ ಮತ್ತೊಂದಕ್ಕೆ ಸಾಗುತ್ತದೆ.

ಯಾವುದೇ ಪಠ್ಯವು ಮತ್ತೊಂದು ಪಠ್ಯದ ಹೊಂದಿಕೆಯಲ್ಲಿರುತ್ತದೆ. ಪಠ್ಯವು ತನಗೆ ಬೇಕಾದ ಆಕರವನ್ನು ಬಳಸಿಕೊಳ್ಳುತ್ತಾ ಇನ್ನೊಂದು ಪಠ್ಯದ ಪ್ರಭಾವವನ್ನು ಆಧರಿಸುತ್ತಾ ಗ್ರಂಥವಾಗುತ್ತದೆ. ಪಠ್ಯವು ಈಗಾಗಲೇ ಬಳಕೆಯಾಗಿರುವ ಮಾತುಗಳನ್ನು ಆಧರಿಸಿದ್ದರೂ ಅದರ ಉಲ್ಲೇಖದ ಕುರಿತು ಚಿಹ್ನೆಗಳೇ ಇರುವುದಿಲ್ಲ. ಹೀಗಾಗಿ ಗ್ರಂಥವು ಏಕಕೇಂದ್ರಿತವಾಗದೇ ಬಹುಮುಖತೆಯನ್ನು ಅವಲಂಬಿಸಿಕೊಳ್ಳುತ್ತದೆ. ಪಠ್ಯವು ಅವಲಂಬಿಸುವ ಶಬ್ದದ ಆದರ್ಶವನ್ನು ಒಳಗೊಂಡು ಬೆಳೆಯುತ್ತದೆ.

ಬಹುಸಾಧ್ಯತೆಯ ಬಂಧವನ್ನು ಅವಲಂಬಿಸಿಕೊಂಡೇ ಪಠ್ಯವನ್ನು ಗ್ರಂಥಕ್ಕಿಂತ ಬೇರೆಯಾಗಿ ನೋಡಲು ಸಾಧ್ಯವಿದೆ. ಇದು ಓದುವ ಕ್ರಮಕ್ಕೆ ಸಂಬಂಧಿಸಿದ ಪ್ರಶ್ನೆ. ಕೆಲವು ಪಠ್ಯಗಳು ಲಿಖಿತವಾಗಿರುವುದರಿಂದ ಅದಕ್ಕೊಂದು ನೈತಿಕ, ಚಾರಿತ್ರಿಕ ನೆಲೆಗಳು ಸಂಪ್ರಾಪ್ತವಾಗುತ್ತದೆ ಅಷ್ಟೆ. ಅದು ಮೂಲ ಅರ್ಥಕ್ಕಿಂತ ಬೇರೆಯಾದ ಅರ್ಥಗಳನ್ನು ಧರಿಸಿಕೊಳ್ಳುತ್ತದೆ. ಉದಾಹರಣೆಗೆ 'ಕರತಲಾಮಲಕ, ಈ ಮಾತಿನ ಮೂಲ ಅರ್ಥ. ಅಂಗೈಯಲ್ಲಿನ ನೆಲ್ಲಿಕಾಯೆಂದಷ್ಟೇ. ಈ ವಾಕ್ಯವನ್ನು ಯಾರೂ ಕೂಡಾ ತೀರಾ ಮೂಲಾರ್ಥಕ್ಕೆ ಸಮೀಪವಾಗಿ ಬಳಸುವುದಿಲ್ಲ. ಈ ರೀತಿಯ ಪರಿವರ್ತನೆಯನ್ನು ಗಮನಿಸದೆ ಈ ಒಂದೇ ಕೇಂದ್ರದಿಂದ ಹೊರಟು ಒಂದು ಅರ್ಥವಿದೆಯೆಂದು ಪರಿಭಾವಿಸುವುದು ಪಠ್ಯದ ಬಹುಮುಖತೆಯನ್ನು ಭೌತಿಕ ಗೊಳಿಸಿದಂತಾಗುತ್ತದೆ. ಮಾರ್ಕ್ಸ್‌ವಾದಿ ಅಧ್ಯಯನ ಕ್ರಮವು ಈ ರೀತಿಯಲ್ಲಿಯೇ ಬಹುಮುಖತೆಯನ್ನು ನಿರಾಕರಿಸಿ ಏಕತ್ರಗೊಳಿಸುತ್ತದೆ.

ಇದರ ಜೊತೆಗೆ ಇನ್ನೊಂದು ಅಂಶವನ್ನು ಗಮನಿಸಬೇಕು- ಗ್ರಂಥವು ಯಾವುದನ್ನು ನಾವು ಗುರುತಿಸುತ್ತೇವೋ ಅದು ನಿರ್ಣಯವಾಗುವುದು ಬಾಹ್ಯ ಜಗತ್ತಿನಲ್ಲಿ. ಅದೂ ಕೂಡಾ, ಜನಾಂಗವೊಂದು ಅದನ್ನು ಕಟ್ಟಿಕೊಳ್ಳುವ ರೀತಿಯಿಂದ. ಜನಾಂಗಕ್ಕೆ ಗ್ರಂಥವು ಬೇಡವಾದರೆ ಚರಿತ್ರೆಯೂ ಕೂಡ ಏನೂ ಮಾಡಲಾರದು.

ಎರಡನೆಯದು ಅದರಷ್ಟಕ್ಕೆ ಅದು ಅನುಕ್ರಮವಾಗಿರುತ್ತದೆ. ಮೂರನೆಯದು ಗ್ರಂಥವು ಬರಹಗಾರನನ್ನು ಗುರುತಿಸುತ್ತದೆ. ಗ್ರಂಥಕರ್ತನು ಗ್ರಂಥದ ತಂದೆಯೆಂದೋ, ಅಥವಾ ಅದರ ಧನಿಯೆಂದೋ ತನ್ನ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಈ ಗ್ರಂಥಕ್ಕೂ ಇರುವ ಸಂಬಂಧ ನ್ಯಾಯಬದ್ಧವಾಗಿದ್ದು, ಗ್ರಂಥದ ಕುರಿತು ಆತನಿಗೆ ಒಂದು ಹಕ್ಕು ಇರುತ್ತದೆ. ಸಾಹಿತ್ಯ ಸಂಶೋಧನೆಯಲ್ಲಂತೂ ಗ್ರಂಥಕ್ಕೆ ಗೌರವಯುತವಾದ ಸ್ಥಾನ ಕಲ್ಪಿತವಾಗಿರುವಂತೆ ಬರಹಗಾರನ ಉದ್ದೇಶಕ್ಕೂ ಗೌರವ ಕಲ್ಪಿತವಾಗಿರುತ್ತದೆ.

ಪಠ್ಯವನ್ನಾದರೋ ಅದರ ತಂದೆಯ ಸಹಿಯಿಲ್ಲದೆಯೂ ಓದಬಹುದು. ಗ್ರಂಥಕ್ಕಿಂತ ಪಠ್ಯದ ವಿವರಣೆಯು ಬೇರೆಯಾದುದು. ಪಠ್ಯದ ರಚನೆಯು ಅಗತ್ಯವಾದ ವಿಸ್ತೃತತೆಯನ್ನು, ಬೆಳವಣಿಗೆಯನ್ನೂ ಹೊಂದಿರುತ್ತದೆ. (ಸೂಚ್ಯವಾಗಿ ಶಬ್ದದ ಅವಶ್ಯಕತೆಯು ಭೌತಿಕ ಮತ್ತು ಕ್ರಿಯಾತ್ಮಕವಾಗಿರುವುದರಿಂದ ಹೀಗಿರುತ್ತದೆ.) ಪಠ್ಯವು ಬಲೆಯಂತಿರುತ್ತದೆ. ಅದನ್ನು ವಿಸ್ತರಿಸಿದರೆ ಅದಕ್ಕೊಂದು ಉಚಿತವಾದ ಕ್ರಮಬದ್ಧವಾದ ಕಲ್ಪನೆಯು ಒಂದು ಬಿಡುತ್ತದೆ. ಈ ಕಾರಣದಿಂದ ಪಠ್ಯಕ್ಕೆ ವಿಶೇಷವಾದ ಗೌರವ ಸಲ್ಲುವುದಿಲ್ಲ. ಇದು ಛೇದಗೊಳ್ಳಬಹುದು. ಅದನ್ನು ತಂದೆಯ ಭಗವಸೆಯಿಲ್ಲದೆಯೂ ಓದಬಹುದು. ಪಠ್ಯಕ್ಕೆ ಲೇಖಕ ಮರಳಿಬರುವ ಸಾಧ್ಯತೆಯೂ ಇಲ್ಲ. ಬರಹಗಾರನು ಕಾದಂಬರಿಕಾರನಾಗಿದ್ದ ಪಕ್ಷದಲ್ಲಿ ಅವನು

ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಬರುವಾಗ ಅವನು ತನ್ನನ್ನೇ ಚಿತ್ರಿಸಿಕೊಂಡು. 'ಹಾಳೆಯ ಗ್ರಂಥಕರ್ತ'ನಾಗುತ್ತಾನೆ, ಕತೆಯನ್ನು ಆತನೇ ಬರೆದಿರುವುದರಿಂದ ಗ್ರಂಥದಲ್ಲಿ ಜೀವನವೂ ಅವನದೇ ಆಗಿರುತ್ತದೆ. ಗ್ರಂಥಕ್ಕೆ ಜೀವನದ ಪರಿಣಾಮ ಹೇಗಿರುತ್ತದೋ ಹಾಗೆಯೇ ಗ್ರಂಥದಿಂದ ಜೀವನಕ್ಕೂ ಪರಿಣಾಮವಿರುತ್ತದೆ. 'ಗಾಂಧೀಜಿಯವರ ಜೀವನ ಚರಿತ್ರೆ'ಯನ್ನು ನಾವು ಓದುತ್ತೇವೆ ಎಂದಿಟ್ಟುಕೊಳ್ಳಿ, ಜೀವನಚರಿತ್ರೆಯೆಂಬ ಗ್ರಂಥವನ್ನು ನಾವು ಓದುವಾಗ ಜೀವನವು ಗ್ರಂಥದಲ್ಲಿ ಒಡಮೂಡಿದೆಯೆಂದೇ ಭಾವಿಸುತ್ತೇವೆ. 'ಜೀವನ-ಚರಿತ್ರೆ'ಎನ್ನುವುದರ ಅರ್ಥವೇ ತುಂಬಾ ಪ್ರಬಲವಾಗಿರುವುದಕ್ಕೆ. - ಶಬ್ದವೇ ಈ ಅರ್ಥವನ್ನು ಸೂಚಿಸುತ್ತದೆ. ಹೀಗಾಗಿ ಸಾಹಿತ್ಯದಲ್ಲಿನ ನೈತಿಕತೆಯು ಅಡ್ಡಹಾಯುತ್ತ ಬರುತ್ತದೆ. ತಪ್ಪು ಸಮಸ್ಯೆಗಳನ್ನು ಸೃಷ್ಟಿಸುತ್ತಿರುತ್ತದೆ.

ಗ್ರಂಥವು ಸಾಮಾನ್ಯವಾಗಿ ಗ್ರಾಹಕರ ವಸ್ತು. ಗ್ರಂಥದ ಗುಣಮಟ್ಟ. (ಇದು ಮುಖ್ಯವಾಗಿ ಅಭಿರುಚಿಗೆ ಸಂಬಂಧಿಸಿದ್ದು) ಮತ್ತು ಓದುವ ಕ್ರಮಕ್ಕೆ ಅನುಸಾರವಾಗಿ ಒಂದು ಗ್ರಂಥಕ್ಕಿಂತ ಇನ್ನೊಂದು ಗ್ರಂಥ ಭಿನ್ನವಾಗಬಹುದು. ಹಾಗೆಂದು ಸಂಸ್ಕಾರವರಿತ ಓದಿಗೂ, ಸಾಮಾನ್ಯ ಕಾರಣದ ಓದಿಗೂ ರಚನೆಯ ದೃಷ್ಟಿಯಿಂದ ಅಷ್ಟೇನೂ ವ್ಯತ್ಯಾಸವಿಲ್ಲ. ಪಠ್ಯವು ಒಂದು ನಾಟಕವಾಗಿ, ಸಮಸ್ಯೆಯಾಗಿ, ಉತ್ಪಾದನೆಯಾಗಿ, ಕ್ರಿಯಾತ್ಮಕ ಚಟುವಟಿಕೆಯಾಗಿ ಇರುವಂತಹುದು. ಇದರರ್ಥ; ಪಠ್ಯವು ಬರಹ ಮತ್ತು ಓದಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತದೆ. ಓದುಗನಿಗೆ ವೇಗವರ್ಧಕದಂತೆ ಇದು ಸಹಾಯ ಮಾಡುತ್ತದೆ.

ಬರವಣಿಗೆಗೂ ಓದಿಗೂ ಇರುವ ಅಂತರ ಚಾರಿತ್ರಿಕವಾದುದು. ಇದೊಂದು ಸಾಮಾಜಿಕ ವಿಭಾಗೀಕರಣಕ್ಕೆ ಸಂಬಂಧಿಸಿದ್ದು. ಬರಹ ಎರಡೂ ವರ್ಗದ ಸೂಚನೆಯಿಂದ ಬಂದಿರುವಂತಹುದು. (ಪ್ರಜಾಪ್ರಭುತ್ವದ ಸಂಸ್ಕೃತಿಯು ಬರುವ ಮೊದಲು ಇವೆರಡೂ ಒಂದೇ ವರ್ಗಕ್ಕೆ ಸಂಬಂಧಿಸಿತ್ತು) ಲಯಬದ್ಧವಾದ, ಮಹತ್ವದ ಸಾಹಿತ್ಯ ಸಂಜ್ಞೆಗಳು ಆ ಕಾಲ ಘಟ್ಟದ ಬರವಣಿಗೆಯನ್ನು ಕಲಿಸಿದವು (ಹಾಗಿದ್ದರೂ ಭಾಷಣಗಳು ಮತ್ತು ಪಠ್ಯಗಳು ಉತ್ಪಾದನೆಯ ರೂಪದಲ್ಲಿ ಬರಲಿಲ್ಲ). ಪ್ರಜಾಪ್ರಭುತ್ವದ ಸಂಸ್ಕೃತಿಯಲ್ಲಿ ಇದು ಬದಲಾಗಿದೆ. ಈಗ ಶಾಲೆಯಲ್ಲಿ ಹೇಗೆ ಓದಬೇಕೆಂದು ಮತ್ತು ಬರೆಯಬೇಕೆಂದು ಕಲಿಸಲಾಗುತ್ತದೆ. (ಓದುವುದು ಮತ್ತು ಬರೆಯವುದು) ಹಾಗೆ ಕಲಿಯುವಾಗ ಅದಕ್ಕಿರುವ ಸ್ವರೂಪಗಳೇ ಬೇರೆಯಾಗುತ್ತವೆ. ಕಲಿಕೆಯ ಶಿಸ್ತಾಗಿ ಓದು ಎನ್ನುವ ಪ್ರಶ್ನೆಯು 'ಓದನ್ನು' ನಿರ್ದಿಷ್ಟಗೊಳಿಸುತ್ತದೆ.

ಓದುವುದು ಎಂದರೆ ಗೃಹೀತ ಅರ್ಥದಲ್ಲಿ ಕೊಂಡುಕೊಳ್ಳುವುದು ಎಂದೇ ಆಗುತ್ತದೆ. 'ಪಠ್ಯ' ವು ಅದರಷ್ಟಕ್ಕೆ ಅದು ಆಟವಾಡುತ್ತದೆ. ಓದುಗ ಎರಡು ಬಾರಿ ಆಟವಾಡುತ್ತಾನೆ ಒಮ್ಮೆ ಕೃತಿಯೊಂದಿಗೆ ಆಟವಾಡುತ್ತಾನೆ. ಮತ್ತೊಮ್ಮೆ ಸ್ವ-ಹುಡುಕಾಟದಲ್ಲಿ ಆಂತರಿಕ ಅನುಕರಣೆಯಲ್ಲಿ ಆಟವಾಡುತ್ತಾನೆ. ಸಂಗೀತದ ಅರ್ಥದಲ್ಲಿಯೂ ಪಠ್ಯದೊಂದಿಗೆ ಆಟವಾಡುತ್ತಾನೆ. ಸಂಗೀತದ ಚರಿತ್ರೆ (ಅಭ್ಯಾಸದ ಕ್ರಮವಾಗಿ ಸಂಗೀತ,-ಕಲೆಯಾಗಿ ಸಂಗೀತವಲ್ಲ.) ಮತ್ತು ಪಠ್ಯದ ಚರಿತ್ರೆಯು ಸಮಾನಾಂತರವಾದುದು. ಸಂಗೀತದ ಆಸಕ್ತಿಯುಳ್ಳವರು ಸಂಗೀತವನ್ನು ಅಭ್ಯಸಿಸಲು ಒಂದು ನಿರ್ದಿಷ್ಟ ಸಮಯವಿದೆ. ಆಟವಾಡುವುದು, ಕೇಳುವುದು ಕೂಡಾ ಇದೇ ರೀತಿಯ ಚಟುವಟಿಕೆಯನ್ನು ಹೊಂದಿದೆ. ಹಾಗಾಗಿ ಇದರ ಯಶಸ್ಸಿಗೆ ಎರಡು ಪಾತ್ರಗಳಿವೆ ಒಂದು, ಅನ್ವಯವಾದುದು, ಸಾರ್ವಜನಿಕರ ಎದುರು ಇವರು ತಮ್ಮ ಪ್ರದರ್ಶನ ಏರ್ಪಡಿಸುತ್ತಾರೆ. ಇನ್ನೊಂದು ಆಸಕ್ತರದು. ಸಂಗೀತ ಗೊತ್ತಿಲ್ಲದಿದ್ದರೂ ಕೇಳುವ ಆಸಕ್ತಿ ಇವರಿಗಿರುತ್ತದೆ.

ಪಠ್ಯವು ಈ ರೀತಿಯಿಂದ ಹೊಸ ತರಹದ್ದು. ಇದು ಓದುಗರ ಸಹಯೋಗವನ್ನು ಬಯಸುತ್ತದೆ.

ಹೀಗಾಗಿ ನಮ್ಮನ್ನು ಪ್ರಶ್ನಿಸುವಂತೆ ಮಾಡುತ್ತದೆ. ಇಂದು ವಿಮರ್ಶಕನೇ ಈ ಎರಡೂ ಕಾರ್ಯವನ್ನು ನಿರ್ವಹಿಸುತ್ತಾನೆ. ಓದು ಕಡಿತಗೊಂಡಾಗ ಅನೇಕರಿಗೆ ಪಠ್ಯವು ಬೋರ್ ಹೊಡೆಸುವ ಕ್ರಿಯೆಯಾಗುತ್ತದೆ. ಪಠ್ಯವು ಬೋರಾಗಲು ಕಾರಣವೆಂದರೆ ಅವನಿಗೆ ಅದರೊಂದಿಗೆ ಆಟವಾಡಲು, ಅನುಭವವನ್ನು ಪುನರ್ ನಿರ್ಮಿಸಲು ಸಾಧ್ಯವಾಗುವುದಿಲ್ಲ ಎಂದಷ್ಟೆ. ಪಠ್ಯವನ್ನು ಚಲಿಸಲು ಅವಕಾಶ ಕಲ್ಪಿಸಿದಾಗ ಅದು ಬೋರ್ ಹೊಡೆಯುವುದಿಲ್ಲ.

ಅಂತಿಮವಾಗಿ ಪಠ್ಯದ ಬಗೆಗಿನ ಗುರಿ-ಸಂತೋಷ. ಸಂತೋಷವು ಗ್ರಂಥದ ಜೊತೆಗಿರುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಫ್ರಾಸ್ಟ್‌ನನ್ನು, ಬಾಲ್ಜಾಕ್‌ನನ್ನು, ಓದುವಾಗ ನನಗೆ ಖುಶಿಯಾಗಿದೆ. . ಯಾವುದೇ ಬರಹಗಾರನನ್ನು ಓದುವಾಗ ಅದರಂತೆ ನನಗೆ ಬರೆಯಲು ಸಾಧ್ಯವಿಲ್ಲ ಎನ್ನುವ ಅತೃಪ್ತಿಯೂ ಇರುತ್ತದೆ.

ಪಠ್ಯವು ಇನ್ನೊಂದೆಡೆಯಿಂದ ಆನಂದವನ್ನು, ತೃಪ್ತಿಯನ್ನು ಕೊಡುತ್ತದೆ. ಸೂಚಕನಿಗೆ ಅನುಗುಣವಾಗಿ ಪಠ್ಯವೂ ಸಾಮಾಜಿಕ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತದೆ. ಚರಿತ್ರೆಯಲ್ಲಿ ತನ್ನ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಕೊನೆಯ ಪಕ್ಷ ಭಾಷೆಯ ಪಾರದರ್ಶಕಗುಣದ ಸಂಬಂಧವನ್ನು ಹೊಂದಿರುತ್ತದೆ. ಭಾಷೆಯು ಇಲ್ಲಿ ಸುತ್ತಾಡುತ್ತದೆ.

ಇದಿಷ್ಟು 'ಪಠ್ಯ,' ದ ಬಗೆಗಿನ ಕೆಲವು ಸೂಚನೆಗಳು. ಪಠ್ಯದ ಸಂವಹನವು ಪಠ್ಯವನ್ನೇ ಹೊಂದಿರುತ್ತದೆ. ಪಠ್ಯಕ್ಕಿರುವ ಸಾಮಾಜಿಕ ಅವಕಾಶದಿಂದ ಅದರ ಭಾಷೆ ಛೇದಗೊಳ್ಳದೆ ಉಳಿಯುವುದಿಲ್ಲ. ಪಠ್ಯದ ಸಿದ್ಧಾಂತವು ಬರಹದ ಚಟುವಟಿಕೆಗೆ ಸಂಬಂಧಿಸಿದುದಾಗಿದೆ.

**ಗ್ರಂಥ ಋಣ:**

1. Roland Barthes-From work to text (ಲೇಖನ)

## ಅಧ್ಯಾಯ-12

# ನಿರಚನವೆಂಬ ಕಟ್ಟಿಲ್ಲದ ಕಟ್ಟು

ನಿರಚನ ಸಿದ್ಧಾಂತವೆಂಬ ನಿಲುವಲ್ಲದ ನಿಲುವನ್ನು ಲೇಖಕನ ಗ್ರಹಿಕೆಗೆ ಅರ್ಥವಾದಷ್ಟು ಈ ಹೊತ್ತಿಗೆಯಲ್ಲಿ ಕಟ್ಟಿಕೊಡಲಾಗಿದೆ. ಈ ಅರ್ಥವಾದಷ್ಟನ್ನು ಇನ್ನು ಮುಂದೆ ಯಾರಾದರೂ ಒಡೆಯಬಹುದು. ಒಡೆಯುವ ಅವಕಾಶವಂತೂ ಇದ್ದೇ ಇದೆಯಾದರೂ ನಿರಚನ ಸಿದ್ಧಾಂತದ ಬಗೆಗೆ ಪ್ರತಿಕ್ರಿಯೆಗಳನ್ನು; ಈ ಲೇಖಕನ ತಾತ್ತ್ವಿಕ ನಿಲುವನ್ನು ಸ್ಪಷ್ಟಪಡಿಸಬೇಕಾದುದು, ಅಗತ್ಯವಾಗಿದೆ. ಹಾಗೆಯೇ ಒಂದು ನಿರ್ದಿಷ್ಟ ಸಂವಾದದ ಕಡೆಗೆ ಮುಖ ಮಾಡಿ ನಿಲ್ಲಬೇಕಾದುದು ಈ ಸಂದರ್ಭದಲ್ಲಿ ಅಗತ್ಯವಾಗಿದೆ.

ನಿರಚನ ಸಿದ್ಧಾಂತವು ಎಲ್ಲಾ ಕಡೆಗೆ ಜಾರುವ ಪ್ರಯತ್ನಮಾಡುತ್ತದೆ. ಅಂದರೆ, ಅದು 'ಜ್ಞಾನ' 'ಸತ್ಯ' 'ಬರಹಗಾರನ ಮನಸ್ಸು' ಮೊದಲಾದ ಸಂಗತಿಗಳನ್ನು ನಿರಾಕರಿಸುವಾಗ ನಿರಚನ ಸಿದ್ಧಾಂತಕ್ಕೆ ಪಠ್ಯವೆಂಬುದು ಮುಖ್ಯವಾಗುತ್ತದೆ. ಪಠ್ಯವನ್ನು ಓದುವ ಕ್ರಮ ಮುಖ್ಯವಾಗುತ್ತದೆ. ಓದುವುದು ಮತ್ತು ಅರ್ಥವಿಸಿಕೊಳ್ಳುವುದು ಒಂದು ಹಂತಕ್ಕೆ ಮೀಸಲಾಗಿರುತ್ತದೆ. ಹೀಗೆ 'ಓದುವುದು' ಒಂದು ಪಠ್ಯದ ವಿಜ್ಞಾನಮುಖಿ ಚೈತನ್ಯವನ್ನು ಗ್ರಹಿಸುವುದು ಎಂದಲ್ಲ. ಡೆರಿಡಾನಿಗೆ ರೂಪಕ ಮುಖ್ಯವಾಗುತ್ತದೆಯೇ ಹೊರತು ಪರಿಕಲ್ಪನೆಯಲ್ಲ. 'ಪರಿಕಲ್ಪನೆ' ಯನ್ನು ನಿರಾಕರಿಸುವುದರ ಮೂಲಕ ನಿರಚನ ಸಿದ್ಧಾಂತವು ತನಗೆ ತಾನೇ ಮಿತಿಯನ್ನು ಹೇರಿಕೊಂಡಿದೆ. ಅದು ನೀಶೆಯನ್ನು ಅವಲಂಬಿಸಿಕೊಂಡಿದೆ ತಾನೆ? 'ಎಲ್ಲೋ' ಇರಬಹುದಾದ 'ಸತ್ಯ' ವೆಂಬುದೇ ಅನೇಕ ಸಮಸ್ಯೆಯನ್ನು ತಂದೊಡ್ಡುತ್ತದೆ.

ನಿರಚನ ಸಿದ್ಧಾಂತವು ಪಠ್ಯವನ್ನು ಅಚಾರಿತ್ರಿಕ ವಿಧಾನದಲ್ಲಿ ಓದಲು ಯತ್ನಿಸುತ್ತದೆ. ಈ ರೀತಿಯ ಅಚಾರಿತ್ರಿಕ ವಿಧಾನದಲ್ಲಿ ಕೃತಿಯನ್ನು ಓದುವುದೆಂದರೆ ಚರಿತ್ರೆ ಮತ್ತು ಸಂಸ್ಕೃತಿಯ ನಿರಾಕರಣೆ. ನಿರಚನ ಸಿದ್ಧಾಂತಿಗಳು ಮಾರ್ಕ್ಸ್‌ವಾದಿ ದೃಷ್ಟಿಕೋನವನ್ನು ತನ್ನ ಪ್ರಬಲ ಎದುರಾಳಿಯೆಂದು ಪರಿಭಾವಿಸುವುದು ಈ ಕಾರಣಕ್ಕೆ. ಮಾರ್ಕ್ಸ್‌ವಾದಿ ಮತ್ತು ರಚನಾವಾದಿ ಚಿಂತಕರು, ಒಬ್ಬ ಕೃತಿಕಾರನ ಆಲೋಚನಾಕ್ರಮ ಮತ್ತು ಅದು ಕೃತಿಯಲ್ಲಿ ಬೀರುವ ಪರಿಣಾಮಗಳ ಕುರಿತು ಚರ್ಚಿಸಿದರೆ ನಿರಚನ ಸಿದ್ಧಾಂತಿಗಳಿಗೆ ಅವು ಯಾವುದೂ ಪ್ರಸ್ತುತ ಅಲ್ಲ!

'ಸತ್ಯ' ಎನ್ನುವುದು ಒಂದೆಡೆಗೆ ಇಲ್ಲದ ನೆಲೆಯೆಂದು ಪ್ರತಿಪಾದಿಸುವ ನಿರಚನ ಸಿದ್ಧಾಂತವು ಓದಿನ ಕ್ರಮವನ್ನು; ಸಂಕೇತಶಾಸ್ತ್ರವನ್ನೂ ತನ್ನ ಚರ್ಚೆಯಲ್ಲಿ ಬಳಸಿಕೊಳ್ಳುತ್ತದ. 'ಸತ್ಯ' ವೆನ್ನುವುದು ಬಹುತ್ವದ ಚೌಕಟ್ಟೆಂದು ಹೇಳುವ ನಿರಚನ ಸಿದ್ಧಾಂತವು ಒಂದೆಡೆಗೆ ಗಟ್ಟಿಯಾಗಿ ಬೇರೂರಿ ನಿಲ್ಲುವುದಿಲ್ಲ. ಇದರಿಂದಾಗಿ ನಿರಚನ ಸಿದ್ಧಾಂತವು ಅರಾಜಕತೆಯನ್ನು ಪರೋಕ್ಷವಾಗಿ ಎತ್ತಿಹಿಡಿಯುತ್ತದೆ.

ನಿರಚನ ಸಿದ್ಧಾಂತವು 'ಅಂತರ'ದ ಬಗೆಗೆ ಬಹಳ ಮಾತಾಡುವುದು ಸರಿಯಷ್ಟೆ 'ಮರ' ಮತ್ತು 'ರಮ'ಎನ್ನುವುದಕ್ಕೆ ವ್ಯತ್ಯಾಸಯೆಂಬುದು ಸರಿ. 'ಮರ' ಯಾವತ್ತೂ 'ರಮ' ಆಗುವುದು ಸಾಧ್ಯವಿಲ್ಲ ನಿಜ. ಇದನ್ನೇ ಎತ್ತಿಹಿಡಿಯುವ ನಿರಚನ ಸಿದ್ಧಾಂತವು ಸಾಧಿಸುವುದಾದರೂ ಏನನ್ನು? ಒಂದು ರೀತಿಯಿಂದ ಇದು ಬುದ್ಧಿವಂತಿಕೆಯ ಆಟದ ತರಹ ಕಾಣಿಸುತ್ತದೆ. ಮಾತಿನ ಮತ್ತು ಬರವಣಿಗೆಯ ಸೂಚನೆಗಳಿಗೂ

ಒಂದು ಸರಳ ನಿಲುವಿರುತ್ತದೆ. ನಾವು 'ಮರ'ವೆಂದು ಕರೆಯುವಾಗ 'ಮರ'ವೆಂದು ಗ್ರಹಿಸುತ್ತೇವೆ. 'ರಮ'ನನ್ನು ಗ್ರಹಿಸಲು ಹೋಗುವುದಿಲ್ಲ. ಹೀಗಾಗಿ ಅದಕ್ಕೊಂದು ನಿರ್ದಿಷ್ಟತೆಯಿದೆ. ಅದನ್ನು ನಿರಚನ ಸಿದ್ಧಾಂತವು ಅನಿರ್ದಿಷ್ಟವೆಂದು ಕರೆಯುತ್ತದೆ. ಹಾಗೆಯೇ ನಿರಚನ ಸಿದ್ಧಾಂತವು ಪ್ರತಿಪಾದಿಸುವ, ಹೇಳುವವನನ್ನು ಹೊರತುಪಡಿಸಿದ ಪಠ್ಯವೆಂಬುದು ಇದೆಯೆ? ಹೇಳುವವನ ಗ್ರಹಿಕೆಗೆ ಅನುಗುಣವಾಗಿ ಪಠ್ಯ ರೂಪುಗೊಳ್ಳುತ್ತದೆಯೇ ಹೊರತು ಹೇಳುವವನನ್ನು ಹೊರತುಪಡಿಸಿ ರೂಪುಗೊಳ್ಳಲು ಸಾಧ್ಯವಿಲ್ಲ. ಇದರಿಂದಾಗಿ ಹೇಳುವವನ ತಾತ್ತ್ವಿಕ ಗ್ರಹಿಕೆಗಳು ಒಂದು ಪಠ್ಯದ ರಚನೆಯ ಮೇಲೆ ಪ್ರಭಾವ ಬೀರುತ್ತವೆ. ನಿರ್ದಿಷ್ಟ ಅರ್ಥವು ಅದಕ್ಕೆ ಪ್ರಾಪ್ತವಾಗುತ್ತದೆ. ಸೂಚಕನಿಗೂ ಸೂಚನೆಗೂ ಹೊಕ್ಕುಳ ಬಳ್ಳಿಯ ಸಂಬಂಧವಿರುತ್ತದೆ.

ನಿರಚನ ಸಿದ್ಧಾಂತವು ಹೇಳುವಂತೆ ಅರ್ಥಗಳು ಚದುರಿಕೊಂಡಿರುವುದಿಲ್ಲ. ಅದಕ್ಕೆ ಒಂದು ನಿಯಮ ಇರುತ್ತದೆ. ಆ ನಿಯಮಕ್ಕೆ ಅನುಸಾರವಾಗಿ ಅರ್ಥವನ್ನು ಗ್ರಹಿಸಲು ಪ್ರಯತ್ನಿಸಬೇಕಾಗುತ್ತದೆ. ಸಂದರ್ಭವನ್ನು ಹೊರತುಪಡಿಸಿ ನಮಗೆ ಬೇಕಾದ ಹಾಗೆ ನಿಘಂಟಿನ ಅರ್ಥಗಳನ್ನು ಪದದ ಮೇಲೆ ಹೇರಲು, ಅರ್ಥೈಸಿಕೊಳ್ಳಲು ಬರುವುದಿಲ್ಲ. ಪಠ್ಯವನ್ನು ಓದುಗನೇ ಅದಕ್ಕೊಂದು ಚೌಕಟ್ಟನ್ನು ಮನಸ್ಸಿನಲ್ಲಿ ರೂಪಿಸಿಕೊಳ್ಳಬೇಕು ಎಂದು ಭಾವಿಸಲು ಬರುವುದಿಲ್ಲ. ನಿರಚನ ಸಿದ್ಧಾಂತವು ಅರ್ಥವಿಸಿಕೊಳ್ಳುವುದು ಎಂಬುದನ್ನು ಪ್ರಧಾನವಾಗಿ ಚರ್ಚಿಸುತ್ತದೆಯಷ್ಟೆ? ಆದರೆ ಅರ್ಥ ಎಂಬುದು ಅದರಷ್ಟಕ್ಕೆ ಅದು ಸಿದ್ಧಗೊಳ್ಳುವ ಪ್ರಕ್ರಿಯೆಯಲ್ಲ. ಅರ್ಥವು ತನ್ನದೇ ಆದ ಅನನ್ಯತೆಯನ್ನು ಪಡೆದುಕೊಂಡಿರುವುದಿಲ್ಲ. ಅಕ್ಷರಗಳ ಸಂಯೋಜನೆಯ ಮೂಲಕ ಅರ್ಥವು ಸ್ಫುರಿಸುತ್ತದೆ. ಅರ್ಥವು ಸಂದರ್ಭವನ್ನು ಆಧರಿಸಿಕೊಂಡಿರುತ್ತದೆ. ನಾವು 'ಮರ' ವೆಂದು ಕರೆಯುವಾಗ ಮರದ ಕಲ್ಪನೆಯು ನಮಗಿರುತ್ತದೆ. ಅದನ್ನು ಬದಲಾಯಿಸಲು ಬರುವುದಿಲ್ಲ. ಹೀಗಾಗಿ ಪ್ರತಿಯೊಂದು ಪದವು ತನ್ನ ಸಂದರ್ಭಕ್ಕೆ ಅನುಸಾರವಾಗಿ ಅರ್ಥವನ್ನು ಸ್ಥಾಪಿಸಿಕೊಳ್ಳುತ್ತದೆ.

ನಿರಚನ ಸಿದ್ಧಾಂತವು ಆಲೋಚನೆಯ ಕ್ರಮವನ್ನು 'ಆಧ್ಯಾತ್ಮ'ಗೊಳಿಸುತ್ತದೆ. ಆಲೋಚನೆಯ ಕ್ರಮವೆನ್ನುವುದು ನಿರ್ದಿಷ್ಟ ಸಾಮಾಜಿಕ ಆರ್ಥಿಕ ಪ್ರಸಕ್ತಿಗಳಿಂದ ಕೂಡಿರುತ್ತದೆ. ಎಂಬುದರ ಮೇಲೆ ಅದಕ್ಕೆ ನಂಬಿಕೆಯಿಲ್ಲ. ಆದರೆ ಈ ದೃಷ್ಟಿಯಿಂದ ನಿರಚನ ಸಿದ್ಧಾಂತದ ವಾದವು ಗಟ್ಟಿಯಾಗಿ ಬೇರೂರುವುದಿಲ್ಲ.

ಓದಿನ ಬಹುತ್ವವನ್ನು ಪ್ರತಿಪಾದಿಸುವ ನಿರಚನ ಸಿದ್ಧಾಂತವು ಓದಿನ ತಾತ್ತ್ವಿಕತೆಯನ್ನು ನಿರಾಕರಿಸುತ್ತದೆ. ಮತ್ತು ಓದಿನ ಮೂಲಕವೇ ಅರಾಜಕತೆಯನ್ನೂ ಅದು ಎತ್ತಿ ಹಿಡಿಯುತ್ತದೆ. ನಿರಚನ ಸಿದ್ಧಾಂತದಲ್ಲಿ ಅರ್ಥಹಿಂಸೆಯೇ ಪ್ರಧಾನವಾಗಿದೆ.

ನಿರಚನ ಸಿದ್ಧಾಂತವು ಓದಿನ ಅಧಿಕಾರವನ್ನು ಎತ್ತಿ ಹಿಡಿಯುತ್ತದೆ. ಮಾತ್ರವಲ್ಲದೆ ನಿರಚನ ಸಿದ್ಧಾಂತವು ಶುದ್ಧಾಂಗವಾಗಿ ಶೈಕ್ಷಣಿಕ ಆಸಕ್ತಿಯನ್ನು ಒಳಗೊಂಡಿರುತ್ತದೆ. ನವ್ಯ ವಿಮರ್ಶೆಯ ಮುಂದುವರಿದ ಭಾಗದಂತೆ ನಿರಚನ ಸಿದ್ಧಾಂತವು ಕಾಣಿಸಿಕೊಂಡಿದೆ. ಯಾವುದನ್ನೂ ನಿಶ್ಚಿತಗೊಳಿಸದ ನಿರಚನ ಸಿದ್ಧಾಂತ ತನ್ನ ಬುಡವನ್ನೇ ಕಳೆದುಕೊಂಡಿದೆ.

ಡೆರಿಡಾ ಹೇಳುವಂತೆ ಒಂದು 'ಪಠ್ಯ'ವು ನಮಗಾಗಿ ಇರುತ್ತದೆ. ಅಂದರೆ ಓದುಗರಿಗಾಗಿ ಪಠ್ಯವೆನ್ನುವ ನಿಲುವು ಆತನದು. ಇದರಿಂದಾಗಿ ಒಬ್ಬ ಬರಹಗಾರನಿಗೂ ಒಂದು ನಿರ್ದಿಷ್ಟ ಬರಹಕ್ಕೂ ಸಂಬಂಧವಿದೆ. ಓದುಗ ಮತ್ತು ಕೃತಿಯ ನಡುವಣ ಸಂಬಂಧವು ನಿರಚನ ಸಿದ್ಧಾಂತಕ್ಕೆ ಮುಖ್ಯವಾಗುತ್ತದೆ

ಬರಹಗಾರನ ತಾತ್ತ್ವಿಕ ನಿಲುವು ಒಂದು ಕೃತಿಯಲ್ಲಿ ಅನುರಣಿತಗೊಳ್ಳುತ್ತದೆಯೆನ್ನುವ ಪ್ರತಿಪಾದನೆಯನ್ನು ನಿರಚನ ಸಿದ್ಧಾಂತವು ಪ್ರಬಲವಾಗಿ ಖಂಡಿಸುತ್ತದೆ. ಓದುಗನ ಮನೋವಲಯವೇ ಕೇಂದ್ರವಾದಾಗ ಕೆಲವು ಸಮಸ್ಯೆಗಳು ಉದ್ಭವಗೊಳ್ಳುತ್ತದೆ. ಉದಾಹರಣೆಗೆ ಬೇಂದ್ರೆಯವರ 'ಕುರುಡು ಕಾಂಚಾಣ ಕವಿತೆ ಕಾಂಚಾಣದ ಕ್ರೌರ್ಯವನ್ನು ಪ್ರತಿಪಾದಿಸುತ್ತದೆ ಎಂಬುದಕ್ಕೆ ಈತನಕ ಯಾವುದೇ ಭಿನ್ನಾಭಿಪ್ರಾಯವು ಒಡಮೂಡಿಲ್ಲ. ಈ ಕವಿತೆಯ ಕೊನೆಯ ಸಾಲುಗಳು ಹೀಗಿವೆ.

''ಹ್ಯಾಂಗಾರೆ ಕುಣಿ ಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ, ಹೆಗಲಲಿ ಎತ್ತೊ''

ಈ ಕುರಿತಂತೆ ಜಿ.ಎಸ್. ಆಮೂರರು ಹೀಗೆ ಹೇಳುತ್ತಾರೆ. 'ಕೆಲವೊಂದು ವಿಮರ್ಶಕರಿಗೆ ಕವಿತೆಯ ಕೊನೆಯ ಸಾಲುಗಳಲ್ಲಿ ಬರುವ ಆಸೆಯ ಸೂಚನೆ ಅಸಹಜವಾಗಿ ಕಂಡಿದೆ. ಆದರೆ ಕಾಂಚಾಣದ ಕುರುಡುತನವನ್ನು ನೆನಪಿನಲ್ಲಿಟ್ಟರೆ ಅದರ 'ಹ್ಯಾಂಗಾರ ಕುಣಿ' ಯುವುದು, ಮಂಗಾಟ, ಅಂಗಾತ ಬೀಳುವುದರಲ್ಲಿ ಕೊನೆಗೊಳ್ಳುವುದರಲ್ಲಿ ಅಸಹಜತೆ ಕಾಣಲಿಕ್ಕಿಲ್ಲ'. (ಜಿ.ಎಸ್. ಆಮೂರರ 1991, ಭುವನಭಾಗ್ಯ, ಪು.182) ಆಮೂರರ ಈ ಅಭಿಪ್ರಾಯ ಕವಿತೆಯ ಆಶಯವನ್ನು ಚರ್ಚಿಸುತ್ತದೆ. ಆದರೆ ನಿರಚನದ ಪ್ರಕಾರ ಯಾರು - ಹೇಗೆ ಬೇಕಾದರೂ ಅಕ್ಷರ ಸಾಮೀಪದ ಮೂಲಕ ಈ ಕವಿತೆಯನ್ನು ಓದಬಹುದು. ಅಷ್ಟೇ ಅಲ್ಲ, ವಿಮರ್ಶಕರಲ್ಲಿ ಕವಿತೆಯ ಓದಿನ ಸಂದರ್ಭದಲ್ಲಿ ಭಿನ್ನಾಭಿಪ್ರಾಯಗಳು ರೂಪುಗೊಳ್ಳಬಹುದು. ಆದರೆ, ಕವಿತೆಯ 'ಕೇಂದ್ರ ಆಶಯ'ದ ಬಗೆಗೆ ಯಾವ ಭಿನ್ನಾಭಿಪ್ರಾಯವು ಒಡಮೂಡುವುದಿಲ್ಲ. ಅಂದರೆ ಕುರುಡು ಕಾಂಚಾಣ 'ಕವಿತೆಯ' ಕುರುಡು ಕಾಂಚಾಣದ ವರ್ತನೆಯೇ ಪ್ರಧಾನ. ಅದುವೇ ಯಜಮಾನಿಕೆಯನ್ನು ಭಂಜನಗೊಳಿಸಬೇಕೆಂದು ಹೇಳುತ್ತದೆ. ಆಳುವುದು, ಆಳಿಸಿಕೊಳ್ಳುವುದು ದ್ವಂದ್ವಾತ್ಮಕವಾಗಿಯೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಯಜಮಾನಿಕೆ ಭಂಜನಗೊಳಿಸಿದ ಮುಂದಿನ ದಾರಿಯಾವುದು ಎಂಬುದಕ್ಕೆ ನಿರಚನವು ಕೇವಲ 'ಬಹುತ್ವ'ವನ್ನೇ ಮುಂದಿಡುತ್ತದೆ.

ಡೆರಿಡಾ ಪದೇ ಪದೇ ಪ್ರಸ್ತಾವಿಸುವ 'ಪಠ್ಯದ' ಕಲ್ಪನೆಯೂ ಕೂಡಾ ಅಭಿವ್ಯಕ್ತಿಗೆ ಸಂಬಂಧಿಸಿದ್ದು. ಅದು 'ಸ್ವಯಂಭೂ'ವಾದ ನೆಲೆಗಟ್ಟಲ್ಲ. ಸಾಹಿತ್ಯದ ಪಠ್ಯವೆಂದರೆ ಅಲ್ಲಿ ಧ್ವನಿಮಾಗಳ ಸಂಯೋಜನೆ ಇರುತ್ತದೆ. ಈ ಸಂಯೋಜನೆಯ ಕ್ರಮವು ಅಷ್ಟೆ. ಅವುಗಳನ್ನು ಬೇಕಾಬಿಟ್ಟಿಯಾಗಿ ಬಳಸುವಂತಿಲ್ಲ ಎಂಬುದು ಒಂದು ನಿಯಮವಾದರೆ ಪ್ರತಿಯೊಬ್ಬ ಲೇಖಕನೂ ಒಂದೊಂದು ಪಠ್ಯವನ್ನು ಕಟ್ಟಿಕೊಡುತ್ತಾನೆ. ಹೀಗೆ ಕಟ್ಟಿಕೊಡುವ ಸಂದರ್ಭದಲ್ಲಿ ಲೇಖಕನ ಚಾರಿತ್ರಿಕ ಸಂದರ್ಭ, ಅವನ ತಾತ್ತ್ವಿಕ ಗ್ರಹಿಕೆ ಮೊದಲಾದವುಗಳನ್ನು ಮರೆಯುವಂತಿಲ್ಲ. ಇನ್ನು ಒಂದು ನಿರ್ದಿಷ್ಟ ಪಠ್ಯಕ್ಕೆ ಪ್ರತಿಕ್ರಿಯಿಸುವುದೆಂದರೆ ಅದೊಂದು ತಕ್ಷಣದ ಪ್ರತಿಕ್ರಿಯೆಯಲ್ಲ. ನಿರಚನ ಸಿದ್ಧಾಂತ ಒಂದು ಪಠ್ಯವನ್ನು ತಕ್ಷಣ ಅರ್ಥವಿಸಿಕೊಳ್ಳುವಿಕೆಯೇ ಮುಖ್ಯವೆಂದು ಭಾವಿಸಿದಂತಿದೆ. ಒಂದು ಪಠ್ಯದ ಓದಿಗೂ ತಾತ್ತ್ವಿಕ ಪ್ರಸಕ್ತಿಯೊಂದಿರುತ್ತದೆ. ಅದಕ್ಕೊಂದು ಶಿಸ್ತಿರುತ್ತದೆ. ಒಂದು ಕೃತಿಯನ್ನು ಓದುವುದೆಂದರೆ ಅಂತಿಮವಾಗಿ ಒಂದು ನಿರ್ದಿಷ್ಟ ತಾತ್ತ್ವಿಕತೆಯೊಂದಿಗೆ ಮುಖಾಮುಖಿಯಾಗಿ ನಿಲ್ಲುವುದು ಎಂದರ್ಥವಾಗುತ್ತದೆ.

ಹಾಗೆಯೇ ಒಂದು ಕವಿತೆಯ ಸಾಲುಗಳನ್ನು ಮೆಚ್ಚುವುದೆಂದರೆ ಕೇವಲ ಅದರ ಶಬ್ದ-ಅರ್ಥಗಳ ಜೋಡಣೆಗೆ ಮಾತ್ರ ಸಂಬಂಧಿಸಿದ್ದು ಎಂದು ಪರಿಭಾವಿಸಬೇಕಾಗಿಲ್ಲ. ಹಾಗೆ ಮಾಡಿದರೆ ಅದು ಸಾಂದರ್ಭಿಕ ಅರ್ಥ ಪ್ರಕ್ರಿಯೆಯನ್ನು ಕವಿತೆಯ ಮೇಲೆ ಹೇರಿದಂತಾಗುತ್ತದೆ. ಸೀರೆಯ ಸೆರಗಿನಿಂದಾಗಿ

ಸೀರೆಯ ಬಣ್ಣಕ್ಕೆ ಮೆರಗು ಬರುವುದಿಲ್ಲವೆ? ನೀರೆಯ ಮೈಯ ಬಣ್ಣದಿಂದಾಗಿ ಒಂದು ಸೀರೆಯ ಬಣ್ಣಕ್ಕೆ ಅರ್ಥ ಬರುವುದಿಲ್ಲವೆ? ಇದನ್ನೆಲ್ಲಾ ಯಾತಕ್ಕಾಗಿ ಮರೆಯಬೇಕು?

ಇದು ಒಂದು ಕವಿತೆಯ ಅರ್ಥವೆಂದು ಹೇಳುವ ಯಜಮಾನಿಕೆಯ ಧೋರಣೆಯನ್ನು ಒಡೆದುಹಾಕುವ ನಿರಚನವು 'ಪ್ರಭುತ್ವರೂಪಿ' ಯಾದ ಅನೇಕ ಸಂಗತಿಗಳನ್ನು ಒಡೆದು ಹಾಕುತ್ತದೆ. ನಿರಚನ ಸಿದ್ಧಾಂತವು ಯಜಮಾನಿಕೆಯ ಪ್ರಶ್ನೆಯನ್ನೂ ಬೇರೆ ಬೇರೆ ವಿಧಾನಗಳಲ್ಲಿ ಕಂಡುಕೊಳ್ಳುತ್ತದೆ. ರಚನಾವಾದಿಗಳಿಗೆ ಉತ್ತರಿಸುವ ಸಂದರ್ಭದಲ್ಲಿ ನಿರಚನ ಸಿದ್ಧಾಂತವು ಪ್ರತಿಪಾದಿಸುವ ನಿಲುವುಗಳಲ್ಲಿ ಇದನ್ನು ಕಾಣಬಹುದು. ರಚನಾವಾದವು ಈಗಾಗಲೇ ಹೇಳಲಾಗಿರುವಂತೆ ಕೆಲವು ದ್ವಂದ್ವರೂಪಿ ಸಮಸ್ಯೆಗಳನ್ನು ಮುಂದಿಡುತ್ತದೆ.

ವಸ್ತು × ರೂಪ
ಶಬ್ದ × ಅರ್ಥ

ಇತ್ಯಾದಿ ಸರಳ ದ್ವಂದ್ವಗಳನ್ನು ನಿರಾಕರಿಸುವಾಗ ರಚನೆಯ, ವಸ್ತುವಿನ , ಅಥವಾ ಶಬ್ದದ ಪ್ರಭುತ್ವವನ್ನು ಒಡೆಯಬೇಕೆಂದು ನಿರಚನವು ಪ್ರತಿಪಾದಿಸಿರುವುದು ಸರಿ. ಆದರೆ ಹೊಂದಾಣಿಕೆಯ ಸಮಸ್ಯೆ ಇದ್ದೇ ಇದೆಯಲ್ಲಾ?

ಒಂದು ನಿರ್ದಿಷ್ಟ ಪಠ್ಯದ ಧ್ವನಿ ಮತ್ತು ಅಭಿವ್ಯಕ್ತಿಯನ್ನು ಮಾತ್ರ ನಿರಚನ ಸಿದ್ಧಾಂತವು ನಂಬುತ್ತದೆ. ಈ ರೀತಿಯ ಧ್ವನಿ ಅಭಿವ್ಯಕ್ತಿ ಮತ್ತು ಧ್ವನಿಯ ಹಿಂದಿನ ಬೇರುಗಳನ್ನು ಆಶ್ರಯಿಸುವ ಸಂದರ್ಭದಲ್ಲಿ ನಿರಚನವು ಅನೇಕ ಯಾದೃಚ್ಛಿಕ ಸಂಗತಿಗಳನ್ನು ಗಮನಕ್ಕೆ ತಂದುಕೊಳ್ಳುತ್ತದೆ. ಉದಾಹರಣೆಗೆ ನಾನು ನಿನ್ನ ತುಟಿ ಹೀರಲು (Suck) ಬಯಸುತ್ತೇನೆ ಎಂಬ ಸಾಲು ಬಂದಿದ್ದರೆ ಇಲ್ಲಿ 'suck' ಎನ್ನುವ ಪದವು 'ಹೀರು'( ಮುದ್ದಿಸು) ಎನ್ನುವ ಅರ್ಥವನ್ನು ಕೊಡುತ್ತದೆ. ಅದೇ ಪದವು ಬೇರೊಂದು ವಾಕ್ಯದಲ್ಲಿ ಹೀಗೆ ಬರುತ್ತದೆ.

ನಾನು ಮಾವಿನ ಹಣ್ಣನ್ನೂ ಹೀರಲು (Suck) ಬಯಸುತ್ತೇನೆ. ಇಲ್ಲಿಯೂ (Suck) ಎನ್ನುವ ಪದವು ಮಾವಿನ ಹೀರು ಎಂಬ ಧ್ವನಿಯನ್ನು ಒಳಗೊಂಡಿದೆ. ಈ ಕುರಿತಂತೆ ಚರ್ಚಿಸುವ ಸಂದರ್ಭದಲ್ಲಿ ಡೆರಿಡಾ ಹೇಳಿರುವಂತೆ suck ಎನ್ನುವುದಕ್ಕೆ ಮೂಲ ಅರ್ಥವು ಬೇರೆಯೇ ಇದೆ. 'ಪಾಯಿಖಾನೆಯಲ್ಲಿ ಹಾಕುವ ನೀರು' 'ಸಳ್ ಎಂಬ ಶಬ್ದ ಮಾಡುತ್ತಾ ಕೆಳಗೆ ಸೇರಿ ಹೋಗುತ್ತದೆ. ಒಂದು ಪದವು ಹೀಗೆ ಅನೇಕ ಅರ್ಥಗಳನ್ನು ಕೊಡುತ್ತದೆ; ವಾಸ್ತವವಾಗಿ ಈ ಚರ್ಚೆಯು ನಿರಚನ ಸಿದ್ಧಾಂತವು ಅರ್ಥನಿಷ್ಪತ್ತಿಯ ಸಂದರ್ಭದಲ್ಲಿ ಚರಿತ್ರೆಯನ್ನು ಆಧರಿಸುತ್ತದೆಯೆಂಬ ಭಾವನೆಯನ್ನು ಉಂಟುಮಾಡುತ್ತದೆ. ಒಂದು ಪದದ ಮೂಲಾರ್ಥ ಶೋಧನೆಯ ಚಾರಿತ್ರಿಕ ಅಂಶವನ್ನು ಒಳಗೊಂಡಿದೆಯೆಂಬ ಭಾವನೆಯನ್ನು ನಿರಚನ ಸಿದ್ಧಾಂತವು ಉಂಟು ಮಾಡುತ್ತದೆಯಾದರೂ ವಾಸ್ತವವಾಗಿ ಚರಿತ್ರೆಯ ಜೊತೆಗಿನ ಸಂಘರ್ಷಗಳು ಅದಕ್ಕೆ ಮುಖ್ಯವಾಗುವುದಿಲ್ಲ. ಅಜೀಜ್ ಅಹ್ಮದ್ ಇದನ್ನು 'ಅರೆ ಹೆಗೆಲಿಯನ್ ದೃಷ್ಟಿಕೋನದ ಚರಿತ್ರೆಯ ಕಲ್ಪನೆ'ಯೆಂದು ಹೇಳುತ್ತಾರೆ. ಮಾರ್ಕ್ಸ್‌ವಾದಿಗಳು ಚರಿತ್ರೆಯನ್ನು ಅರ್ಥಮಾಡಿಕೊಳ್ಳುವಾಗ ಅದರಲ್ಲಿ ದ್ವಂದ್ವಾತ್ಮಕವಾದ ಪ್ರವೃತ್ತಿಯನ್ನು ಕಾಣುತ್ತಾರೆ. ಒಂದು ಪದವು ತನ್ನ ಅರ್ಥವನ್ನು ಬದಲಾಯಿಸಿಕೊಳ್ಳಬೇಕಾದ್ದಕ್ಕೆ ಅದರದೇ ಆದ ಚಾರಿತ್ರಿಕ ಕಾರಣವಿರುತ್ತದೆ. ಅರ್ಥ ಸುಮ್ಮನೆ ಪಲ್ಲಟಗೊಳ್ಳುವುದಿಲ್ಲ. ಅರ್ಥ ಪಲ್ಲಟವಾಗಬೇಕಾದ್ದರ ಹಿನ್ನೆಲೆಯಲ್ಲಿ ಚರಿತ್ರೆಯ ಒತ್ತಡವಿರುತ್ತದೆ.

ಒಂದೊಂದು ಪದವು ಕೂಡಾ ನಿರ್ದಿಷ್ಟಪ್ರಜ್ಞಾಪೂರ್ವಕವಾದ ಪ್ರತಿಕ್ರಿಯೆಯ ಫಲವಾಗಿರುತ್ತದೆ. ಪ್ರಜ್ಞೆಯೆನ್ನುವುದು .ರೂಪುಗೊಳ್ಳುವುದು ಚಾರಿತ್ರಿಕ ಸಾಂಸ್ಕೃತಿಕ ಘರ್ಷಣೆಗಳ ಫಲವಾಗಿ. ಹೀಗಾಗಿ ಪ್ರಜ್ಞೆಯನ್ನು ಸಮೇತವಾಗಿ ಯಾವುದನ್ನು ಚರಿತ್ರೆಯಿಂದ ಹೊರತುಪಡಿಸಿ ನೋಡುವಂತಿಲ್ಲ. ಅದನ್ನು ಮೊದಲು ಮನದಟ್ಟು ಮಾಡಿಕೊಳ್ಳಬೇಕು. ಹೀಗಾಗಿ ಬರಿಯ ಧ್ವನಿಯನ್ನು ಅವಲಂಬಿಸಿಕೊಂಡು ಒಂದೊಂದು ಪದಕ್ಕೂ ಇರಬಹುದಾದ ಬೇರುಗಳನ್ನು ಚರಿತ್ರೆಯೆಂಬಂತೆ ತೋರ್ಪಡಿಸಿಕೊಳ್ಳುವುದು ಭದ್ರ ಬುನಾದಿಯನ್ನು ಒದಗಿಸುವುದಿಲ್ಲ.

ನಿರಚನ ಸಿದ್ಧಾಂತವು ಪದೇ ಪದೇ 'ಸಾಹಿತ್ಯಕ ಮೌಲ್ಯ' ಎಂದು ಮಾತಾಡುತ್ತದೆ. ಏನಿದು ಈ ಸಾಹಿತ್ಯದ ಮೌಲ್ಯ ? ಸಾಹಿತ್ಯದ ಮೌಲ್ಯವೆಂದು ಕರೆಯುವ ಪ್ರತಿಯೊಂದು ಸಂಗತಿಗಳೂ ಬೌದ್ಧಿಕ ಉತ್ಪಾದನೆಯ ಫಲವಾಗಿದೆ. ಸಾಹಿತ್ಯದ ಮೌಲ್ಯವೆಂಬುದಕ್ಕೆ ಪ್ರತ್ಯೇಕ ಅನನ್ಯತೆಯೆಂಬುದಿಲ್ಲ. ಹಾಗೆಯೇ ನಿರಚನ ಸಿದ್ಧಾಂತವು ಓದುಗ ಒಂದು ಸಾಹಿತ್ಯವನ್ನು ತನಗೆ ಬೇಕಾದಂತೆ ರಚಿಸುವಯತ್ನ (Compose)ಮಾಡುತ್ತದೆ. ಆದುದರಿಂದ 'ರೂಪ'ದ ಅನನ್ಯತೆಯೆಂಬುದಾಗಲೀ, ಚರಿತ್ರೆಯ ಮುಖಾ ಮುಖಿ ಎಂಬುದಾಗಲೀ ನಿರಚನಕ್ಕೆ ಮುಖ್ಯವಲ್ಲ. ತೀರಾ ಸರಳವಾದ ಮರುಪ್ರಶ್ನೆಯಿಷ್ಟೆ: ಓದುಗ ಸಾಹಿತ್ಯವನ್ನು ತನಗೆ ಬೇಕಾದಂತೆ ರಚಿಸಲು (Compose) ಬರುತ್ತದೆ. ಅವನ ಓದಿನ ಕ್ರಮವು ನಿರ್ದಿಷ್ಟವಾದ ತರ್ಕಬದ್ಧತೆಯನ್ನು ಒಳಗೊಂಡಿರುತ್ತದೆ.

ಕಲ್ಪನೆಯೆಂಬುದನ್ನು ಡೆರಿಡಾ ಒಂದು ತತ್ತ್ವಜ್ಞಾನದಂತೆ ಕಾಣುತ್ತಾನೆ. ಇದು ಉದಾರವಾದಿ ಮಾನವತಾವಾದದ, ಬಲಪಂಥೀಯ ಆಲೋಚನಾ ಕ್ರಮದಿಂದ ಹುಟ್ಟಿರುವ ಪ್ರಶ್ನೆಯಾಗಿದೆಯೆಂದು ಅಜೀಜ್ ಅಹ್ಮದ್ ಅವರು ಹೇಳುತ್ತಾರೆ.

'ಸತ್ಯ ' 'ಜ್ಞಾನ ' ಇತ್ಯಾದಿ ಪ್ರಶ್ನೆಗಳನ್ನು ಚರ್ಚಿಸುವಾಗ ಡೆರಿಡಾ ಅದನ್ನು ಆಯ್ಕೆಯಲ್ಲಿ ಇಡುತ್ತಾನೆ. ಪಠ್ಯವೊಂದು ಹೇಳುವ ಸತ್ಯವು ನಾವು ಓದುವ ಕ್ರಮವನ್ನು ಅವಲಂಬಿಸಿಕೊಂಡಿದೆಯೆಂದು ಆತನ ವಾದ. ಉದಾಹರಣೆಗೆ ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ?' ಕವಿತೆಯನ್ನು ನೋಡಬಹುದು. ಈ ಕವಿತೆಯು ಒಬ್ಬರಿಗೆ ವಸಾಹತು ಶಾಹಿ ಅನುಭವದ್ಯೋತಕವಾಗಿ ಕಂಡರೆ, ಮತ್ತೊಬ್ಬರಿಗೆ ಹಕ್ಕಿಯ ಪ್ರತಿಮೆಯು 'ಆತ್ಮ' ಪ್ರಶ್ನೆಯಂತೆ ಕಾಣಬಹುದು. ಆದುದರಿಂದ ನಿರಚನವಾದಿಗಳ ಪ್ರಕಾರ ಸತ್ಯ ಎಲ್ಲಿದೆ? ತೀರಾ ಸೂಕ್ಷ್ಮವಾಗಿ ಗಮನಿಸಿದರೆ ಈ ನಂಬಿಕೆಯ ಅಥವಾ ಸತ್ಯದ ಪ್ರಶ್ನೆಯು ಆಯ್ಕೆಗೆ ಸಂಬಂಧಿಸಿದಂತೆ ರೂಪುಗೊಂಡಿರುತ್ತದೆ. ನಂಬಿಕೆಯೇ ಒಂದು ಪ್ರಶ್ನಾರ್ಹವಾದ ಸ್ಥಿತಿಯಾಗುವುದು ಯಾವಾಗ ಎಂಬುದು ತೀರಾ ಸಾಮಾನ್ಯ ಮನುಷ್ಯರಿಗೂ ಅರ್ಥವಾಗಬಲ್ಲ ಸಂಗತಿ.

ಡೆರಿಡಾ ಒಂದು ಸಂದರ್ಭದಲ್ಲಿ ಹೇಳಿರುವ ಮಾತಿಗೂ ಮೇಲೆ ಉಲ್ಲೇಖಿಸಲಾಗಿರುವ ನಿಲುವಿಗೂ ಒಂದು ಸಂಬಂದ ಇದೆ ಮಾರ್ಕ್ಸ್ ಸತ್ತ, ಕಮ್ಯೂನಿಸಂ ಕೂಡಾ ಮೃತಪಟ್ಟಿತು. ಮಾರ್ಕ್ಸ್‌ವಾದದ ಸಂವಹನ ಪ್ರಕ್ರಿಯೆಗಳು, ಅದರ ಸಿದ್ಧಾಂತಗಳು, ಅದರ ಅಭ್ಯಾಸಕ್ರಮಗಳು ಎಲ್ಲವೂ ನೆಗೆದುಬಿದ್ದು ಹೋದವು ಇದು ಬಂಡವಾಳಶಾಹಿ ವ್ಯವಸ್ಥೆ ದೀರ್ಘ ಭವಿಷ್ಯ ಸೂಚಿಸುತ್ತದೆ. ಆದರೆ ಮಾರುಕಟ್ಟೆ ವ್ಯವಸ್ಥೆಯಲ್ಲಿನ ಸುದೀರ್ಘ ಜೀವನವನ್ನು ಪ್ರತಿಪಾದಿಸುತ್ತದೆ. ಇದು ಆರ್ಥಿಕ ಮತ್ತು ರಾಜಕೀಯ ಉದಾರತೆಯು ಮುಂದೆಯೂ ಜೀವಿಸಬಲ್ಲದು ಎಂಬುದಕ್ಕೆ ಸೂಚನೆಯಾಗಿದೆ; ನಿರಚನ ಸಿದ್ಧಾಂತ ಡೆರಿಡಾಗೆ ಬಂಡವಾಳಶಾಹಿ ವ್ಯಯಸ್ಥೆಯು ಕರುಣಿಸುತ್ತಿರುವ ಹಸಿವೆ, ಬಡತನ, ನಿರುದ್ಯೋಗ ಮೊದಲಾದವು

ಕಾಣಿಸದಿರುವುದು ಈ ಸಿದ್ಧಾಂತಕ್ಕೆ ಒಂದು ಕೈಗನ್ನಡಿದಯಾಗಿದೆ. ಉದಾರೀಕರಣದ ಹೆಸರಿನಲ್ಲಿ ಶ್ರೀಮಂತ ದೇಶಗಳು ಬಡದೇಶಗಳ ಮೇಲೆ ನಡೆಸುತ್ತಿರುವ ಸಾಂಸ್ಕೃತಿಕ ಮತ್ತು ಆರ್ಥಿಕ ದಬ್ಬಾಳಿಕೆಯ ಅನುಭವ ಭಾರತೀಯರಿಗಂತೂ ಆಗಿದೆ. ಹೇರಲಾಗಿರುವ ಶಾಬ್ದಿಕ ಅರ್ಥದ ನಿರಚನವಾಸಬೇಕೆಂದು ಪ್ರತಿಪಾದಿಸುವ ನಿರಚನ ಸಿದ್ಧಾಂತವು ಬಂಡವಾಳಶಾಹಿ ವ್ಯವಸ್ಥೆಯೊಳಗಿನ ದ್ವಂದ್ವಗಳನ್ನು ಹೇಗೆ ಅರ್ಥಮಾಡಿಕೊಳ್ಳುತ್ತದೆ? ಅವರು ಕೊಟ್ಟದ್ದನ್ನು ಪಡೆಯುವ ಭಾರತೀಯ ಬಡ ಶಾಲಾವಿದ್ಯಾರ್ಥಿಗಳು: ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಾಹಿತ್ಯವೆಂಬ ಹೆಸರಿನಲ್ಲಿ ಬರುವ ಅನೇಕಾನೇಕ ಗ್ರಂಥಗಳು, ಪೋರ್ಡಿನ ಮುಂದೆ ಜೀಯಾ, ಹಸಾದವೆಂದು ಇಲ್ಲಿಯ ಸರಕುಗಳನ್ನು ಬುದ್ಧಿಯನ್ನೂ ಒತ್ತಿಯಿಡುವ ಬುದ್ಧಿಜೀವಿಗಳು ನಿರಚನದ ಚೌಕಟ್ಟಿನಲ್ಲಿ ಹೇಗೆ ಕಾಣಿಸುತ್ತಾರೆ?

ಬಂಡವಾಳಶಾಹಿ ವ್ಯವಸ್ಥೆಯ ಜೊತೆಗೆ ಪೈಪೋಟಿ ನಡೆಸುವ ಮೂಲಭೂತವಾದಿಗಳ ಬಗ್ಗೆಯೂ ಇಲ್ಲಿ ಪ್ರಸ್ತವಿಸಬೇಕು ಮಹಾಚೈತ್ರದ ಬಗ್ಗೆ ಮೂಲಭೂತವಾದಿಗಳು ಎಬ್ಬಿಸಿರುವ ಗಲಭೆ, ತಸ್ಲಿಮಾ ಮತ್ತು ರಷ್ದಿಪ್ರಕರಣಗಳು ಪವಿತ್ರ ಮತ್ತು ಅಪವಿತ್ರವೆಂಬ ಜಗಳದಲ್ಲಿಯೇ ನಿಂತಿವೆಯಷ್ಟೆ? ಆಯಾ ಪಠ್ಯಗಳನ್ನು ಅವರು ಓದಿದ ಪರಿಕ್ರಮವು ಹಾಗೆಯೇ ಹೇಳಲು ಬರುತ್ತದೆಯೇ? ಸಂಪ್ರದಾಯಸ್ಥರು, ಅವರಿಗೆ ಬೇಕಾದ ಹಾಗೆ ಅರ್ಥ ಮಾಡಿಕೊಂಡಿದ್ದಾರೆ. ಸಮಾಜವಾದಿಗಳು ಅವರಿಗೆ ಬೇಕಾದ ಹಾಗೆ ಅರ್ಥಮಾಡಿಕೊಳ್ಳಬಹುದು ಎಂದು ಪರಿಭಾವಿಸುವುದು ಎಷ್ಟರಮಟ್ಟಿಗೆ ಸರಿ? ಈ ಪ್ರಶ್ನೆಯನ್ನು ನಿರಚನ ಸಿದ್ಧಾಂತಿಗಳಿಗೆ ಕೇಳಬೇಕಾಗುತ್ತದೆ.

'ಧರ್ಮವೆಂದರೆ ಹಿಂದೂ ಧರ್ಮ' 'ಸಂಸ್ಕೃತಿಯೆಂದರೆ ಹಿಂದೂ ಸಂಸ್ಕೃತಿ' ಎಂದು ಕೋಮುವಾದಿಗಳು ಹೇಳುವುದನ್ನು ಗಮನಿಸಿ. ಈ ಮಾತುಗಳು ಈಗ ರಾಜಕೀಯ ಪರಿಭಾಷೆಯಾಗಿ ರೂಪುಗೊಂಡಿದೆ. ನೆಹರೂ ಕಾಲದಿಂದಲೂ ಪ್ರಚಲಿತಕ್ಕೆ ಬಂದ 'ಅನೇಕತೆಯಲ್ಲಿ ಏಕತೆ' ಯೆಂಬ ಮಾತುಗಳನ್ನು ಈ ರೀತಿಯ ಮಾತುಗಳು ನಿರಚನಗೊಳಿಸುತ್ತವೆ. ಇದರ ಹಿಂದಿರುವ ರಾಜಕೀಯ ಚಿಂತನಾಕ್ರಮವು ನೆಹ್ರೂವಿನ ಬಗ್ಗೆ, ಗಾಂಧಿಯ ಬಗ್ಗೆ, ಹೆಚ್ಚೇಕೆ ಇಂದಿರಾಗಾಂಧಿ, ರಾಜೀವ ಗಾಂಧಿಯವರ ಚಿಂತನಾಕ್ರಮಗಳನ್ನು ದೂರವಿಡುವುದಕ್ಕೆ ಮತ್ತು ರಾಜಕೀಯ ಅಧಿಕಾರ ಪಡೆದುಕೊಳ್ಳುವುದಕ್ಕೆ ಚಾಲ್ತಿಗೆ ಬಂದ ಮಾತುಗಳು. ರಾಜಕೀಯವಾದ ಈ ಗ್ರಹಿಕೆಗಳು ಧರ್ಮವನ್ನು, ಸಂಸ್ಕೃತಿಯನ್ನು ತನಗೆ ಬೇಕಾದ ಹಾಗೆ ಅರ್ಥಮಾಡಿಕೊಂಡಿವೆ. ಚಾಲ್ತಿಗೆ ತಂದಿವೆ. ಭಾರತದ ಅನೇಕ ತತ್ತ್ವಜ್ಞಾನಗಳ ಬೇರುಗಳನ್ನು ನೆಲಸಮಗಳಿಸಿವೆ. ಇದರ ಪರಿಣಾಮವೆಂದರೆ ನಿರಚನ ನಿರಂತರವಾಗಿ ನಡೆಯತ್ತಾ ಹೋದರೆ ನಾವೆಲ್ಲಾ 'ಅವಕಾಶ'( ನಿರಚನ ಪದ)ದಲ್ಲಿ ತೇಲಾಡುತ್ತವೆ. ನಿರಚನ ಸಿದ್ಧಾಂತವು ಮಾನವನ ಹಕ್ಕು ಮತ್ತು ಆಯ್ಕೆಗಳನ್ನು ಬಹುಮುಖದ ಕಡೆಗೆ ಇಡುತ್ತದೆ. ನೈತಿಕತೆಯಿಂದ ಶುರು ಮಾಡಿ ಪ್ರತಿಯೊಂದನ್ನು ಕೂಡಾ ಬಹು ಆಯ್ಕೆಯಲ್ಲಿ ಇಡುವುದರಿಂದ ಸಂದಿಗ್ಧತೆಯು ಏರ್ಪಡುತ್ತದೆ. ಮೌಲ್ಯದ ಪ್ರಶ್ನೆಯನ್ನಾಗಲೀ ನೈತಿಕತೆಯ ಪ್ರಶ್ನೆಯನ್ನಾಗಲೀ ನಿರಚನ ಸಿದ್ಧಾಂತವು ಪ್ರಶ್ನಿಸುವುದರಿಂದಲೇ ಒಂದು ರೀತಿಯ 'ಅನಾಯಕತೆ'ಯೆಂಬುದು ನಿರಚನ ಸಿದ್ಧಾಂತದಲ್ಲಿ ಏರ್ಪಡುತ್ತದೆ. ಹಾಗೆ ನೋಡುವುದರಿಂದಲೇ ನಿರಚನ ಸಿದ್ಧಾಂತವು ಪರ ಮತ್ತು ವಿರುದ್ಧ ಎಂಬುದನ್ನು ನಿರಾಕರಿಸುತ್ತದೆ. ಹೀಗೆ ನಿರಚನವು ನಿರಾಕರಿಸುತ್ತದೆಯೆಂದರೆ ಅದು ಯಾವುದನ್ನು ಸೂಚಿಸುತ್ತದೆ. ? ಯಾವುದನ್ನೂ ಸೂಚಿಸದೇ ಇರುವುದೇ ' ನಿರಚನ'.

ಸತ್ಯವೆನ್ನುವುದನ್ನು ನಿರಚನವು ಪ್ರಶ್ನಿಸುವುದರ ಮೂಲಕ ಉದಾರವಾದಿ ಚಿಂತನೆಯನ್ನು ನಮ್ಮ ಮುಂದಿಡುತ್ತದೆ. ಒಂದು ಕೃತಿಯ ಆಶಯವನ್ನಾಗಲೀ ಅದರ ಮೌಲ್ಯಗಳನ್ನಾಗಲೀ ಕುರಿತು ಮಾತಾಡುವುದು

ನಿರಚನದ ಪ್ರಕಾರ 'ಹೇರುವಿಕೆ'ಯ ಪ್ರಶ್ನೆಯಾಗುತ್ತದೆ. ಆದರೆ ಈ ರೀತಿಯ 'ಅಸಂಖ್ಯ'( ಇದನ್ನು ನಿರಚನದ ದೃಷ್ಟಿಯಿಂದಲೇ ಹೇಳಲಾಗಿದೆ.) ಹೇರುವಿಕೆಗಳು ನಮ್ಮಂಥವರ ಮೇಲೆ ಯಾವ ಯಾವ ರೀತಿಯಲ್ಲಿ ಹಲ್ಲೆಗಳನ್ನು ನಡೆಸುತ್ತದೆ. ಇದು ಎಷ್ಟರ ಮಟ್ಟಿಗೆ ಇದೆಯೆಂದರೆ ನಾವು ಓದುವ, ಚಿಂತಿಸುವ ಕ್ರಮಗಳ ಮೇಲೆಲ್ಲಾ ಅಧಿಕಾರಶಾಹಿಯ ಕರಿನೆರಳುಗಳಿವೆ. ಈ ಕುರಿತು ನಿರಚನವು ಮಾತಾಡುವುದಿಲ್ಲ. ಮಾತಾಡಿದರೂ ಅದರಿಂದ ಬಿಡುಗಡೆಹೊಂದಬೇಕೆಂದು ಹೇಳುತ್ತದೆ ಅಷ್ಟೇ.

'ಜ್ಞಾನ ಮತ್ತು ಚರಿತ್ರೆ'ಯೆಂಬ ಪ್ರಶ್ನೆಯೂ ಕೂಡಾ ನಿರಚನದಲ್ಲಿ ಅನು ಮಾನವನ್ನು ಸೃಷ್ಟಿಸಿದೆ. ಹಾಗಿದ್ದರೆ ನಿರಚನವು ಯಾವುದನ್ನು ಒಪ್ಪುತ್ತದೆ?.

ಚರಿತ್ರೆ ಮತ್ತು ಜ್ಞಾನದ ಬಗ್ಗೆ ಅನುಮಾನಗಳನ್ನು ಎತ್ತುವುದರ ಮೂಲಕ ನಿರಚನವು ತನ್ನ ವಾದವನ್ನು ಕತೆಯಂತೆ ನಮಗೆ ಹೇಳುತ್ತದೆ. ಇದರಿಂದಾಗಿ ಚರಿತ್ರೆ ಮತ್ತು ಜ್ಞಾನದ ಬಗೆಗಿನ ಪ್ರಕ್ರಿಯೆಗಳು ನಿರಚನದ ಪ್ರಕಾರ ಅನುಮಾನದ ಹಾಗೂ ಸಂವಾದಿಯಾದ ಪರಿಕಲ್ಪನೆಗಳ ಪ್ರಶ್ನೆಗಳಾಗಿವೆ. ಚರಿತ್ರೆ ಮತ್ತು ಜ್ಞಾನದ ಪ್ರಶ್ನೆಗಳು ಅನುಮಾನದ ರೂಪಕವಾದರೆ ನಮ್ಮ ಓದಿಗೆ ಮತ್ತು ಚಿಂತನೆಗೆ ಎಷ್ಟು ಅರ್ಥ ಉಳಿಯುವುದು ಸಾಧ್ಯ? ಚರಿತ್ರೆಯ ಪ್ರಶ್ನೆಗೆ ಮತ್ತು ಜ್ಞಾನದ ಪ್ರಶ್ನೆಗೆ ನಿರಚನವು ಇಡುವ ಬಹುತ್ವದ ಚೌಕಟ್ಟು ನಿಯಮ ಮತ್ತು ಭಾಷೆಯ ಅರ್ಥದ ಕಡೆಗೂ ಸಾಗಿದೆ. ಯಾವುದೇ ನಿಯಮವೆನ್ನುವುದು ನಿರಚನದ ಮಟ್ಟಿಗೆ ಅನಗತ್ಯವಾದ ವಾದದ ತರಹ ಕಾಣಿಸುತ್ತದೆ.

ನಮ್ಮ ರಾಜಕೀಯ ಸ್ಥಿತಿ, ನಮ್ಮ ಹಕ್ಕುಗಳು, ಕರ್ತವ್ಯಗಳು, ನಮ್ಮಲ್ಲಿನ ಭಾಷಿಕ ವ್ಯಾಪಾರಗಳು ಇವೆಲ್ಲವನ್ನು ನಿಯಮ ರಾಹಿತ್ಯ ಸ್ಥಿತಿಯಲ್ಲಿ ನೋಡಲು ಸಾಧ್ಯವೆ? ಬಹುತ್ವವೆನ್ನುವ ಪ್ರಶ್ನೆಯನ್ನು ನಿರಚನವು ನಮ್ಮ ಮುಂದಿಡುವಾಗ ಅನವಶ್ಯಕವಾದ ಆಯಾಸವನ್ನು ಪಟ್ಟುಕೊಳ್ಳುತ್ತಿದೆಯೆಂದು ಅನಿಸುತ್ತದೆ. **ಪ್ರತಿಯೊಂದನ್ನು ವಿಕೇಂದ್ರೀಕರಿಸುವುದು ಮತ್ತು 'ಒಂದರ ಮೇಲೆ ಮತ್ತೊಂದು ಅಲ್ಲ' ವೆಂಬ ವಾದವನ್ನು ಮುಂದಿಡುವುದು ನಿರಚನದ ಗುರಿ.** ಆದರೆ ಇದನ್ನೇ ಒಂದು ದೇಶ ರಾಜಕೀಯ ಸ್ವರೂಪಕ್ಕೆ ಅನ್ವಯಿಸಿದರೆ ಆಗುವ ಗತಿಯನ್ನು ನೋಡಿ : ರಾಜಕೀಯ ಸ್ವರೂಪವೇ ಈ ವಾದದ ಹಿನ್ನೆಲೆಯಿಂದ ಗೈರು ಹಾಜರಿಯಾಗಬಹುದು. ಭಾರತದ ಬದಲಿಗೆ ಪ್ರದೇಶ, ಪ್ರದೇಶದ ಬದಲಿಗೆ? ಹೀಗೆ ಅನ್ವಯ ಮಾಡುತ್ತಾ ಹೋದರೆ ಯಾವುದೇ ಸಂಗತಿಗಳಿರುವುದಿಲ್ಲ. ಒಂದು ರಾಜಕೀಯ ಮೌಲ್ಯವೇ ನಿರಚನದ ದೃಷ್ಟಿಕೋನದ ಗೈರುಹಾಜರಿಯಾಗುತ್ತದೆ.

ನಿರಚನ ಸಿದ್ಧಾಂತವು ಅಂತಿಮವಾಗಿ ಎತ್ತಿಹಿಡಿಯುವುದು ವ್ಯಕ್ತಿಕೇಂದ್ರಿತ ಚಿಂತನೆಯನ್ನೇ ಹೊರತು ಮತ್ತೆ ಯಾವುದನ್ನು ಅಲ್ಲ. ನಾವರಿತ ಸತ್ಯವೆಂದು ಯಾವುದು ಕಾಣಿಸುತ್ತದೆಯೋ ಅದನ್ನು ಮಾತ್ರ ನಿರಚನ ಸಿದ್ಧಾಂತವೂ ತೀವ್ರವಾಗಿ ಒಪ್ಪಿಕೊಳ್ಳುತ್ತದೆ. ಹೀಗಾಗಿ ಸಾಮಾಜಿಕ ಸತ್ಯವೆಂಬುದು ಇದರಲ್ಲಿ ಅನುಮಾನಾಸ್ಪದ.

ಹೀಗಾಗಿ ನಿರಚನ ಸಿದ್ಧಾಂತವು ನೇರವಾದ ಒಂದು ಶೈಕ್ಷಣಿಕ ಅಭ್ಯಾಸ ಮಾತ್ರ. ಅದು ವ್ಯಕ್ತಿಕೇಂದ್ರಿತವಾದ ನಿಲುವನ್ನು ಒಳಗೊಂಡಿದೆ. ವ್ಯಕ್ತಿಯನ್ನು ಬಂಡವಾಳಶಾಹಿ ವ್ಯವಸ್ಥೆಯು ಬೇರ್ಪಡಿಸಿ ನೋಡುವಂತೆ ಈ ಸಿದ್ಧಾಂತವು ಬೇರ್ಪಡಿಸಿ ನೋಡುತ್ತದೆ. ಒಟ್ಟಿನಲ್ಲಿ ಈ ಎಲ್ಲಾ ಕಾರಣಗಳಿಂದ ನಿರಚನ ಸಿದ್ಧಾಂತವನ್ನು ಒಪ್ಪುವುದು ಸದ್ಯ ನನಗೆ ತುಂಬಾ ಕಷ್ಟವಾಗಿದೆ.

# ಗ್ರಂಥ ಋಣ


ಅನಂತಮೂರ್ತಿ:ಯು ಆರ್. **1996. ಪೂರ್ವಾಪರ** ಅಕ್ಷರ ಪ್ರಕಾಶನ, ಸಾಗರ.

ಆಮೂರ: ಜಿ. ಎಸ್. 1989. **ಅರ್ಥಲೋಕ** ಸ್ನೇಹ ಪ್ರಕಾಶನ. ಬೆಂಗಳೂರು.

ಆಮೂರ: ಜಿ. ಎಸ್. 1998.ಸಮಕಾಲೀನ ಕಥೆ ಕಾದಂಬರಿ **ಹೊಸ ಪ್ರಯೋಗಗಳು** ಕ.ಸಾ.ಪ. ಬೆಂಗಳೂರು.

ಅಶೋಕ: ಟಿ. ಪಿ. 1986. **ಸಾಹಿತ್ಯ ಸಂಪರ್ಕ** ಅಕ್ಷರ ಪ್ರಕಾಶನ, ಸಾಗರ.

ಆರ್ಕೆ ಮಣಿಪಾಲ 1988 **ಸಾಹಿತ್ಯ ಆಶಯ ಮತ್ತು ವಿನ್ಯಾಸ.** ಸಂಕ್ರಮಣ ಪ್ರಕಾಶನ, ಧಾರವಾಡ.

ಆರ್ಕೆ ಮಣಿಪಾಲ. 1995 **ಲೋಕ ಗ್ರಹಿಕೆ ಮತ್ತು ಅಭಿವ್ಯಕ್ತಿ** ಸಂಕ್ರಮಣ ಪ್ರಕಾಶನ ಧಾರವಾಡ.

ಕುರ್ತಕೋಟಿ ಕೀರ್ತಿನಾಥ 1982 **ವಿಮರ್ಶೆಯ ವಿನಯ** ( ಕಾದಂಬರಿ). ಮನೋಹರ ಗ್ರಂಥ ಮಾಲೆ ಧಾರವಾಡ.

ಕೀರ್ತಿನಾಥ ಕುರ್ತಕೋಟಿ .1996. **ರಾಜಸ್ಪರ್ಶ.** ಮನೋಹರ ಗ್ರಂಥ ಮಾಲೆ ಧಾರವಾಡ.

ಕುರ್ತಕೋಟಿ 1964 **ವಾಸುದೇವ ಪ್ರಶಸ್ತಿ** ವಾಸುದೇವ ವಿನೋದಿನಿ ನಾಟ್ಯಸಭಾ **ಬಾಗಲು ಕೋಟೆ**

ಕುವೆಂಪು. 1972. **ಸಾಹಿತ್ಯ ಪ್ರಚಾರ** ಕಾವ್ಯಾಲಯ. ಮೈಸೂರು .

ಕೇಶವ ಶರ್ಮ ಕೆ. 1992. **ಕ್ರಿಯೆ- ಪತ್ರಿಕ್ರಿಯೆ** ಅನ್ವೇಷಣೆ ಪ್ರಕಾಶನ, ಬೆಂಗಳೂರು.

ಕೇಶವ ಶರ್ಮ ಕೆ. 1998 **ಶಬ್ದರೇಖೆ** ಅಭಿನವ , ಬೆಂಗಳೂರು.

ಕೃಷ್ಣಶಾಸ್ತ್ರಿಎ.ಆರ್. 1960 **ಭಾಷಣಗಳು ಮತ್ತು ಲೇಖನಗಳು** ಶಾರದಾಮಂದಿರ, ರಾಮಯ್ಯರ್ ರಸ್ತೆ ಮೈಸೂರು.

ಗೋವಿಂದರಾಜ: ಗಿರಡ್ಡಿ 1981 **ಸಾಹಿತ್ಯ ಮತ್ತು ಪರಂಪರೆ** ಅಭಿಜಾತ ಗ್ರಂಥ ಮಾಲೆ ಬೆಂಗಳೂರು.

ಗೋವಿಂದರಾಜ ಗಿರಡ್ಡಿ 1997 **ವಚನ ವಿನ್ಯಾಸ** ಅಕ್ಷರ ಪ್ರಕಾಶನ, ಸಾಗರ.

ಗೋವಿಂದ ರಾಜ ಗಿರಡ್ಡಿ 1973. **ನವ್ಯ ವಿಮರ್ಶೆ.** ಅಕ್ಷರ ಪ್ರಕಾಶನ, ಸಾಗರ.

ಗಿರಡ್ಡಿ ಗೋವಿಂದ ರಾಜ 1987 **ಕಾದಂಬರಿ ವಸ್ತು ಮತ್ತು ತಂತ್ರ** ಸ್ನೇಹ ಪ್ರಕಾಶನ ಬೆಂಗಳೂರು .

ಚಿದಾನಂದ ಮೂರ್ತಿ (ಸಂ) 1980 **ಶ್ರೀ ಕಂಠತೀರ್ಥ** ತೀ ನಂ. ಶ್ರೀ ಸ್ನೇಹಿತರ ಬಳಗ.

ತಿಮ್ಮಪ್ಪಯ್ಯ ಮುಳಿಯ 1977 **ನಾಡೋಜ ಪಂಪ** ಗೀತಾ ಬುಕ್ ಹೌಸ್. ಮೈಸೂರು.

ತಿಪ್ಪೇರುದ್ರಸ್ವಾಮಿ 1993. **ತೌಲನಿಕ ಕಾವ್ಯಮೀಮಾಂಸೆ** ಡಿ.ವಿ.ಕೆ. ಮೂರ್ತಿ ಮೈಸೂರು.

ನರಸಿಂಹಾಚಾರ್ ಪು.ತಿ. 1980 **ಕಾವ್ಯ ಕುತೂಹಲ** ಡಿ.ವಿ.ಕೆ. ಮೂರ್ತಿ ಮೈಸೂರು

ನರಸಿಂಹಾಚಾರ್ ಡಿ.ಎಲ್. 1971 **ಪೀಠಿಕೆಗಳು ಮತ್ತು ಲೇಖನಗಳು** ಡಿ.ವಿ.ಕೆ. ಮೂರ್ತಿ ಮೈಸೂರು.

ನಾಗರಾಜ ಡಿ. ಆರ್. 1990. **ಅಮೃತ ಮತ್ತು ಗರುಡ** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು.

ನಾಗರಾಜ ಡಿ. ಆರ್. 1999. **ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ** ಅಕ್ಷರ ಪ್ರಕಾಶನ ಸಾಗರ.

ನಾರಾಯಣ ಕೆ.ವಿ. (ಸಂ) 1992 **ಅನ್ಯ ಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ** ಕರ್ನಾಟಕ ಸಾಹಿತ್ಯ ಆಕಾಡೆಮಿ ಬೆಂಗಳೂರು.

ನಾಗಭೂಷಣ ಸ್ವಾಮಿ: ಓ. ಎಲ್. **ವಿಮರ್ಶೆಯ ಪರಿಭಾಷೆ,** ಪರಿಸರ ಸಾಹಿತ್ಯ ಪ್ರಕಾಶನ ಶಿವಮೊಗ್ಗ.

ನಾಯಕ ಜಿ.ಎಚ್. 1988. **ನಿಜದನಿ** ಅಕ್ಷರ ಪ್ರಕಾಶನ ಸಾಗರ.

ನಾಯಕ ಜಿ.ಎಚ್. 1984 **ನಿರಪೇಕ್ಷ** ಅಕ್ಷರ ಪ್ರಕಾಶನ ಸಾಗರ.

ಬಾಲಸುಬ್ರಹ್ಮಣ್ಯ ನರಹಳ್ಳಿ (ಸಂ) 1982, **ಸಾಹಿತ್ಯ ವಿಮರ್ಶೆ** ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

ರಹಮತ್ ತರೀಕೆರೆ 1993 **ಪ್ರತಿ ಸಂಸ್ಕೃತಿ** ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

ರಹಮತ್ ತರೀಕೆರೆ 1996 **ಮರದೊಳಗಣ ಕಿಚ್ಚು** ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ರಾಮಚಂದ್ರನ್: ಸಿ.ಎನ್. 1986 **ಶಿಲ್ಪ ವಿನ್ಯಾಸ** ಕನ್ನಡ ಸಂಘ ಸಂತ ಫಿಲೋಮಿನಾ ಕಾಲೇಜು ಮತ್ತೂರು.

ರಾಮಚಂದ್ರನ್ ಸಿ.ಎನ್. 1989 **ಸಾಹಿತ್ಯ ವಿಮರ್ಶೆ** ಕರ್ನಾಟಕ ಸಾಹಿತ್ಯ ಆಕಾಡೆಮಿ ಬೆಂಗಳೂರು.

ರಾಮಚಂದ್ರನ್ ಸಿ.ಎನ್. 1986 **ಸ್ವರೂಪ** ಕನ್ನಡ ಅಧ್ಯಯನ ವಿಭಾಗ ಮುಂಬೈ ವಿ.ವಿ. ಮುಂಬಯಿ.

ರಾಮದೇವ ಶೆಣೈ ಆರ್. (ಸಂ) 1964 **ದೀವಿಗೆ** ಗೋವಿಂದ ಪೈ ಸ್ಮಾರಕ ನಿಧಿ, ಕುಂದಾಪುರ.

ರಾಘವೇಂದ್ರರಾವ್ ಎಚ್.ಎಸ್. 1989 **ನಿಲುವು** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು ಬೆಂಗಳೂರು.

ರಾಜೇಂದ್ರಚೆನ್ನಿ 1987 **ಅಧ್ಯಯನ** ಪರಿಸರ ಸಾಹಿತ್ಯ ಪ್ರಕಾಶನ ಶಿವಮೊಗ್ಗ.

ಲೀಲಾ ಭಟ್ (ಸಂ) 1979 **ಉಗ್ರಾಣ** (ಸಂ) ಕರ್ನಾಟಕ ಸಂಘ ಪುತ್ತೂರು.

ವೆಂಕಟಸುಬ್ಬಯ್ಯ ಜಿ. 1997 **ಇಗೋ ಕನ್ನಡ** ನವ ಕರ್ನಾಟಕ ಪ್ರಕಾಶನ ಬೆಂಗಳೂರು.

ವೆಂಕಟೇಶ ಅಯ್ಯಂಗಾರ್ ಮಾಸ್ತಿ 1971 **ಸಾಹಿತ್ಯದಿಂದ ಆಗುವ ಕೆಲಸ** ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಬೆಂಗಳೂರು.

ಮಾಸ್ತಿ 1945 **ಮಾಸ್ತಿಯವರ ಪುಸ್ತಕಗಳು** (ಉಪನ್ಯಾಸ-1) ಜೀವನ ಕಾರ್ಯಾಲಯ ಬೆಂಗಳೂರು.

ವಾಮನಬೇಂದ್ರೆ (ಸಂ) 1974 **ಸಾಹಿತ್ಯ ವಿರಾಟ ಸ್ವರೂಪ** ಸಮಾಜ ಪುಸ್ತಕಾಲಯ ಧಾರವಾಡ.

ಶಾಂತಿನಾಥ ದೇಸಾಯಿ 1989 **ಕನ್ನಡ ಕಾದಂಬರಿ ನಡೆದು ಬಂದ ದಾರಿ** ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

ಶಿವರುದ್ರಪ್ಪ ಜಿ.ಎಸ್. 1983 **ಕಾವ್ಯಾರ್ಥ ಚಿಂತನ** ಶಾರದಾ ಪ್ರಕಾಶನ ಬೆಂಗಳೂರು.

ಶಿವರುದ್ರಪ್ಪ ಜಿ.ಎಸ್. (ಸಂ) 1980 **ಶ್ರೀನಿಧಿ** ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

ಶಿವರುದ್ರಪ್ಪ ಜಿ.ಎಸ್. (ಸಂ) **ವಿಮರ್ಶೆಯ ದಾರಿ** (ಸಂ) ಪ್ರಸಾರಾಂಗ ಬೆಂಗಳೂರು ವಿ.ವಿ. ಬೆಂಗಳೂರು.

ಶ್ರೀಕಂಠಯ್ಯ ತೀ.ನಂ. 1970 **ಕಾವ್ಯಾನುಭವ** ಶಾರದಾ ಮಂದಿರ ರಾಮಯ್ಯ ರಸ್ತೆ, ಮೈಸೂರು.

ಶ್ರೀಕಂಠಯ್ಯ ತೀ.ನಂ. 1974 **ಸಮಾಲೋಕನ** ಶಾರದಾ ಮಂದಿರ ಮೈಸೂರು.

ಶ್ರೀಕಂಠಯ್ಯ ಬಿ.ಎಂ. 1970 **ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ**, ಕಾವ್ಯಾಲಯ ಮೈಸೂರು.

Barthes Rolan, 1963, **Semiotic challenge**, Basil Blackwell.

Brenda K. Marshall, 1992. **Teaching the post modern.** Routledge. New York.

Barthes; Roland 1986. **The Rustle of language** Basic Blackwell.

Stephen Regan 1998 **The Eagleton Reader,** Black well.

Selden Raman. 19985. **A Readers Guie to, Contemprrary literary theory** . Harvester.

Terence Hawkes. 1977, **Structuralism and semiotics,** Methuen and cohtd.

Bloom:Harold 1975.**A map of misrading** Oxford University press

Catherime Belsey 1980 **Critical practice** Methuen, London.

Cathy caruth, 1995. **Critical Encounters** Routledge university press. Newjersy.

David Lodge, 1989, **20th century Literary criticism.** Longman London.

Das B.B; Mohanthy:m.1985.**Literary Criticism-A Reading,** Oxeford university press.

Denniswlder, 1990, **Literature in the modern world,** Oxeford university press.

Eagleton terry, 1983, **Literary theory: An, introduction,** Basil Blackwell, Oxeford.

Eco:Umbert, 1992, **Interpretation** and **over interpreta tion,** cambridge university press.

Frye: Northrop,1957, **Anotomy of, criticism**, priecton uni press.

Jucian wolfreys CED: 1998, **The derrida, Reader,**

Edinbarg university press.

Josue.v. Harari , **Textual strategies,** Methuem , London.

Linda Hutcheon, 1993, **The politics of post, modernism,** Routledge,London.

Mortin Heidegger, 1979 **Nietz sche(vol-1),** Routledge

& keganpaul.

Michel Foucault,1977, **The Archaelogy of knowledge,** Tavistock publication.

Norris christopher ofher, 1982. **Deconstruction; Theory and practice,** Metuen. London.

Paue de man, 1971, **Blindness and insight**, University of minnesota press,

## ಅಭಿನವ ಪುಸ್ತಕ ಯೋಜನೆ

ಯೋಜನೆಯ ಅಂತರಂಗ: ಅನನ್ಯ ಅನ್ಯೋನ್ಯ, ಮತ್ತು ಅನ್ಯ ಎಂಬ ಮೂರು ಪ್ರತ್ಯೇಕ ಗ್ರಂಥಮಾಲೆಗಳನ್ನೊಳಗೊಂಡಿದ್ದು ಅನುಕ್ರಮವಾಗಿ ಸೃಜನಶೀಲ, ಸೃಜನೇತರ ಮತ್ತು ಭಾಷಾಂತರ ಕೃತಿಗಳ ಮಡಿಲಾಗಿರುತ್ತದೆ.

* ಭೂಮಿ, ಜೈವಿಕಶಾಸ್ತ್ರ ಮತ್ತು ಪರಿಸರ ವಿಷಯಕ್ಕೆ ಸಂಬಂಧಿಸಿದಂತೆ ವಿಶೇಷ ಶೀರ್ಷಿಕೆಗಳು.

* ಪ್ರಸಕ್ತ ಆರ್ಥಿಕ ವ್ಯವಸ್ಥೆ, ರಾಜಕೀಯ ಚಿಂತನೆ, ಪ್ರಚಲಿತ ವಿದ್ಯಮಾನ ಕುರಿತು ವೈಜ್ಞಾನಿಕ, ವೈಚಾರಿಕ ಸ್ಪರ್ಷದ ಪ್ರಕಟಣೆಗಳು.

* ಮಾನವಶಾಸ್ತ್ರ ತತ್ವಶಾಸ್ತ್ರ ಸಮಾಜಶಾಸ್ತ್ರ ಭಾಷಾವಿಜ್ಞಾನ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ತಲಸ್ಪರ್ಶಿ ಪುಸ್ತಕಗಳು.

* ಹಿರಿ-ಕಿರಿ ಬರಹಗಾರರ ಸತ್ವಪೂರ್ಣ ಕೃತಿಗಳು.

* ಇತರೇ ಭಾಷೆಗಳ ಮೌಲಿಕ ಕೃತಿಗಳ ಸಮರ್ಥ ಅನುವಾದಗಳು.

* ವಾರ್ಷಿಕ ಸುಮಾರು ೫00 ಪುಟಗಳ ಮಿತಿಯಲ್ಲಿ ವಿಭಿನ್ನ ಸಾಹಿತ್ಯ.

ಎಲ್ಲರ, ಎಲ್ಲಾ ಸಂಘ ಸಂಸ್ಥೆ-ಶಾಲಾ ಕಾಲೇಜುಗಳ ಗ್ರಂಥಭಂಡಾರದಲ್ಲಿ ಇರಬೇಕಾದ ಪುಸ್ತಕಗಳು.
ಆಜೀವ ಚಂದಾ ಹಣ: ರು. ೨000/- (ವ್ಯಕ್ತಿಗಳಿಗೆ) ಮತ್ತು ರು. ೨,೫00/- (ಸಂಸ್ಥೆಗಳಿಗೆ)

ಸಾಮಾಜಿಕ ಕಾಳಜಿಯುಳ್ಳ ನೀವೆಲ್ಲರೂ ಈ ಯೋಜನೆಯಲ್ಲಿ ಭಾಗಿಯಾಗಿ,ಸಮಾಜಕ್ಕೆ ಒಳ್ಳೆಯ ಕೊಡುಗೆಯಾಗಬಲ್ಲಂಥ ಪಸ್ತಕಗಳನ್ನು ಪ್ರಕಟಿಸುವಲ್ಲಿ ನಿಮ್ಮ ಹಣ ತೊಡಗಿಸಲು ಅವಕಾಶಕೊಡಿ. ಅದಕ್ಕೆ ಪ್ರತಿಯಾಗಿ ಮೌಲಿಕವಾದ ಪ್ರಕಟಣೆಗಳನ್ನು ಕೊಡುವ ಪ್ರೀತಿಪೂರ್ವಕ ಜವಾಬ್ದಾರಿ ನಮ್ಮದು.

ಹಣವನ್ನು ಅಭಿನವದ ಹೆಸರಿಗೆ ಡಿ. ಡಿ./ ಚೆಕ್ ಮೂಲಕ ಕಳುಹಿಸಿ (ಪರಸ್ಥಳದ ಚೆಕ್ಕಗಳಿಗೆ ಬ್ಯಾಂಕ್ ಕಮೀಷನ್ ರು. ೧೫/- ಪ್ರತ್ಯೇಕ)

# ನಮ್ಮ ಪುಸ್ತಕಗಳು

ಪ್ರೀತಿಸುವುದೆಂದರೆ . . . (ಮೂಲ: ಎರಿಕ್‌ಫ್ರಾಂ -- ಆರ್ಟ್ ಆಫ್ ಲವಿಂಗ್)
ಅನು: ಡಾ. ಎಚ್.ಎಸ್. ರಾಘವೇಂದ್ರರಾವ್, ಡಾ. ಕೆ. ವಿ. ನಾರಾಯಣ ೫೦/-
ಬೆಳದಿಂಗಳು (ಮಕ್ಕಳ ಕಾದಂಬರಿ) ಆನಂದ ವಿ. ಪಾಟೀಲ ೨೫/-
ರಚನೆ ನಿರಚನೆ - (ವಿಮರ್ಶೆ) ಕೇಶವ ಶರ್ಮ ಕೆ . ೮೦/-
ಕರುಳಬಳ್ಳಿಯ ಸೊಲ್ಲು(ಬೇಂದ್ರೆ ಕಾವ್ಯವಿಮರ್ಶೆ) - ರಾಜೇಂದ್ರ ಚೆನ್ನಿ ೪೦/-
ಯಾರ ಜಪ್ತಿಗೂ ಸಿಗದ ನವಿಲುಗಳು(ದೇವನೂರ ಮಹಾದೇವ ಸಾಹಿತ್ಯ ಕುರಿತು) -
ಸಂ. ಪಿ. ಚಂದ್ರಿಕಾ ೧೨೦/-
ನೀಲಿತತ್ತಿ (ಕವನ ಸಂಕಲನ) - ಲಕ್ಷ್ಮೀಪತಿ ಕೋಲಾರ ೫೦/-
ಜನ್ನ ಮತ್ತು ಅನೂಹ್ಯ ಸಾಧ್ಯತೆ (ಕಥಾ ಸಂಕಲನ) - ಆನಂದ ಋಗ್ವೇದಿ ೫೦/-
ವಿರೋಧ ವಿಲಾಸ - ವಕ್ರೋಕ್ತಿ ವರಸೆಗಳು -- ಎಂ. ಎಸ್. ಕೆ. ಪ್ರಭು ೩೦/-
ದೇಶೀ ದರ್ಶನಗಳು - ವಿವಿಧ ಲೇಖಕರು ೬೦/-
ನಮ್ಮ ತವಕ ತಲ್ಲಣಗಳು - ಲೇಖನಗಳು - ಕೆ. ವಿ. ಸುಬ್ಬಣ್ಣ * ೬೦/-
ಮಾಗಿ ಮೂವ್ವತ್ತೈದು - ಕಥೆಗಳು- ಕೇಶವ ಮಳಗಿ ೬೫/-
ಪಾತಿದೋಣಿ - ಕಥೆಗಳು - ಉಮಾ ಹೆಗಡೆ* ೪೫/-
ಶಬ್ದರೇಖೆ - ವಿಮರ್ಶೆ - ಕೇಶವಶರ್ಮ. ಕೆ * ೫೦/-
ಅನಾಹತನಾದ - ಸಂಗೀತ ಕುರಿತು - ವಿವಿಧ ಲೇಖಕರು ೩೫/-
ಕದಳೀವನ ಕರ್ಪೂರ - ಪರಿಸರ ಚಿಂತನೆ - ವಿವಿಧ ಲೇಖಕರು ೫೦/-
ಯದುಗಿರಿಯ ಅಂಗಳದಿಂದ - ಪುತಿನ ಸಾಹಿತ್ಯ - " - * ೪೫/-
ಕ್ಯಾಪ್ಸೂಲಗಿತ್ತಿ - ಅಂಕಣ ಬರಹ - ನಾಗೇಶ ಹೆಗಡೆ ೩೦/-
ಚಲ್ ಮೇರಿ ಲೂನಾ - ಪ್ರಬಂಧಗಳು - ಆರ್. ನಿರ್ಮಲ * ೫೦/-
ಪಾಮೆಂ ಹೇಳಿದ ಕಥೆ - ಕಥೆಗಳು - ರವಿಬೆಳಗೆರೆ * ೪೦/-
ದಾಂಪತ್ಯಕ್ಕೊಂದುಶೀಲ - ಪ್ರಬಂಧಗಳು - ಕೆ. ಸತ್ಯನಾರಾಯಣ ೩೦/-
ಒಂದು ಅನುರಾಗಕ್ಕಾಗಿ ಎಷ್ಟೆಲ್ಲಾ - ಕವನ - ಕೆ.ಪಿ.ಮೃತ್ಯಂಜಯ * ೨೦/-
ಆಶಯ ಆಕೃತಿ - ವಿಮರ್ಶೆ- ಸಿ. ಎನ್. ರಾಮಚಂದ್ರನ್ ೧೨೦/-
ಖಾಸ್‌ಬಾತ್- ೯೭ - ಅಂಕಣ ಬರಹ - ರವಿಬೆಳಗೆರೆ ೭೫/-
ಕಂಪ್ಯೂಟರ್‌ಗೊಂದು ಕನ್ನಡಿ - ಡಾ. ಸಿ. ಪಿ. ರವಿಕುಮಾರ್* ೨೭/-
ನೋಟ ಪಲ್ಲಟ (ದೃಶ್ಯಸಂಸ್ಕೃತಿ ಕುರಿತು) ಎಚ್.ಎ.ಅನಿಲ್ ಕುಮಾರ್ ೩೫/-
ಇಚ್ಛಾಶಕ್ತಿಯ ನಿರೂಪ - ವೋಲೆ ಷೋಯಿಂಕಾ ಸಾಹಿತ್ಯ ಕುರಿತು - ವಿವಿಧ ಲೇ.* ೩೫/-
ಪರ್ಯಾಯ ಚಿಂತನೆ - ಉಪಭೋಗವಾದ - ವಿವಿಧ ಲೇಖಕರು ೨೦/-
ಅಂಧ ಮಕ್ಕಳ ಅರಿವಿನಂಗಣ - ಎಂ. ಆರ್. ಮಂದಾರವಲ್ಲಿ ೨೫/-
ಮೊದಲ ಕಟ್ಟಿನ ಗದ್ಯ - ಲೇಖನಗಳು - ಎಚ್. ಎಸ್. ಶಿವಪ್ರಕಾಶ್ ೭೦/-
ಹಿಮಗರ್ಭ - ಪ್ರವಾಸ ಕಥನ -- ರವಿಬೆಳಗೆರೆ (ಅಚ್ಚಿನಲ್ಲಿ)
ಮಾನವತೆ ಅಂತಾರಲ್ಲಾ. . . ದೇವನೂರ ಮಹದೇವರ ಬಿಡಿ ಲೇಖನಗಳು(ಅಚ್ಚಿನಲ್ಲಿ)
ಕನ್ನಡಿಯೊಳಗಿನ ಕನ್ನಡಿ - ಕನ್ನಡ ಫ್ಯಾಂಟಸಿ ಕಥೆಗಳು-
ಸಂ. ಎಸ್. ದಿವಾಕರ್ ಮತ್ತು ಎಂ. ಎಸ್. ಕೆ. ಪ್ರಭು (ಅಚ್ಚಿನಲ್ಲಿ)

* ಪ್ರತಿಗಳು ಮುಗಿದಿವೆ.

ನಿರಚನಾವಾದವು ಸಾಹಿತ್ಯ ಕುರಿತ ಚಿಂತನೆಗಳಲ್ಲಿನ ಒಂದು ಹೊಸ ಆಯಾಮ. ರಚನಾವಾದವು ಎತ್ತಿ ಹಿಡಿಯುವ ನಿರ್ದಿಷ್ಟತೆಯನ್ನು ನಿರಾಕರಿಸುತ್ತಲೇ ಇದು ಹೊಸ ಮಾರ್ಗಗಳನ್ನು ಸೂಚಿಸುತ್ತದೆ. ಸಿದ್ಧ ಸಾಹಿತ್ಯ, ವಿಮರ್ಶಾ ಮಾದರಿಗಳನ್ನು ಕೂಡ ಒಪ್ಪುವುದಿಲ್ಲ.

ರಚನಾಕ್ರಮಕ್ಕೆ ಪೂರ್ಣ ಕೇಂದ್ರೀಕೃತಗೊಂಡ ವಿಮರ್ಶಾ ಪಂಥಗಳು ಕನ್ನಡದಲ್ಲಿ ಇವೆ. ಕನ್ನಡಕ್ಕೆ ಇತ್ತೀಚಿನ ದಿನಗಳಲ್ಲಿ ಬಂದ ನಿರಚನಾ ಸಿದ್ಧಾಂತವನ್ನು ಮೊದಲ ಬಾರಿಗೆ ವಾಗ್ವಾದ ರೂಪಕ್ಕೆ ತಂದವನು ಫ್ರಾನ್ಸ್ ದೇಶದ ಜೇಕೋಸ್ ಡೆರಿಡಾ. ಭಾಷೆಯ ಮೇಲಿನ ದೃಷ್ಟಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಒಂದು ಸಂಗತಿಗೆ ಇನ್ನೊಂದು ಸಂಗತಿಯನ್ನು ಎದುರಾಗಿಸುವುದರ ಮೂಲಕವೇ ಕೇಂದ್ರದಿಂದ ದೂರವುಳಿಯುವ ಪ್ರಯತ್ನವನ್ನು ಈ ಚಿಂತನೆ ಮಾಡುತ್ತದೆ.

ನಿರಚನ ಸಿದ್ಧಾಂತವೆಂದರೆ ವಿಮರ್ಶಾ ಪರಂಪರೆಯು ನಿರ್ಮಿಸಿದ ನಿಲುವನ್ನು ಭಂಜಿಸುವುದು ಮಾತ್ರವಲ್ಲ. ನಿರ್ದಿಷ್ಟ ಬಗೆಯ ಓದಿನ, ಚಿಂತನೆಯ ಕ್ರಮವನ್ನು ವಿರೋಧಿಸುವುದು ಕೂಡಾ ಆಗಿದೆ.

ಅಲ್ಲೊಂದು ಇಲ್ಲೊಂದು ಲೇಖನಗಳಾಗಿ ರಚನ-ನಿರಚನ ಸಿದ್ಧಾಂತಗಳ ಕುರಿತ ವಾಗ್ವಾದವೊಂದು ಈಗಾಗಲೆ ಕನ್ನಡ ವಿಮರ್ಶೆಯ ಗಂಭೀರ ಓದುಗರಿಗೆ ಪರಿಚಿತವಾಗಿದೆಯಾದರೂ ಬಹುಶಃ ಇಡಿಯಾಗಿ ಬರುತ್ತಿರುವುದು ಕೇಶವ ಶರ್ಮರ ಈ ಪುಸ್ತಕದಲ್ಲಿಯೇ. ಕನ್ನಡ ಚಿಂತನಾಕ್ರಮವು ಇದನ್ನು ಹೇಗೆ ಸ್ವೀಕರಿಸುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ.

-- ಪಿ. ಚಂದ್ರಿಕಾ

